# ಅರ್ಪಣೆ

ನನ್ನ ತಂದೆತಾಯಿಗಳ
ಚರಣ ಕಮಲಗಳಲ್ಲಿ :

ಎಷ್ಟು ಎತ್ತರ ನೆಗೆದರೇನು ಬುಗ್ಗೆ ?
ಮತ್ತೆ ಕೆಡೆಯುವುದು ಬುವಿಯೊಲವು ಜಗ್ಗೆ.
ದಿಟ, ಹಿರಿದು—ಅದಕೆ ಕೆಳೆಯಾಯ್ತು ಮುಗಿಲು.
ಆದರದಕೆಡೆ ಬಿರಿದ ಬುವಿಯೆ ಮಿಗಿಲು !

# ಮುನ್ನುಡಿ

ಚಿ. ಶ್ರೀಮಾನ್ ಬಿಳಿಗಿರಿಯವರು ತಮ್ಮ ಕವನ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು ನನ್ನಿಂದ ಅಪೇಕ್ಷಿಸಿದ್ದಾರೆ. ಮಂಗಳಕಾರ್ಯವೊಂದನ್ನು ಪ್ರಾರಂಭಿಸುವುದಕ್ಕೆ ಮುಂಚೆ ಯಜಮಾನನು ಪುರೋಹಿತರಿಂದ "ಓಂ ನಮಃ ಸದಸೇ" ಎಂದು ಹೇಳಿಸುವಂತೆ, ಬಿಳಿಗಿರಿಯವರು ತಮ್ಮ ಪ್ರಥಮ ಕೃತಿಯನ್ನು ಸಹೃದಯರಿಗೊಪ್ಪಿಸುವ ಪೂರ್ವಭಾವಿಯಾಗಿ ನನ್ನನ್ನು ಈ ಕೆಲಸಕ್ಕೆ ನಿಯೋಜಿಸಿರುವುದು ಅವರ ಸೌಜನ್ಯವನ್ನೂ ಸತ್‌ಸಂಪ್ರದಾಯಾಭಿರುಚಿಯನ್ನೂ ತೋರಿಸುತ್ತದೆ. ಈ ಕವನಗಳನ್ನು ಓದಿ ನಾನು ಬಹು ಸಂತೋಷಪಟ್ಟಿದೇನೆ. ಈ ಸಂತೋಷ ಸಾಂಕ್ರಾಮಿಕವಾಗಬೇಕೆಂದು ಅವರ ಆಸೆಯೇನೋ. ನನಗೆ ತಿಳಿದಮಟ್ಟಿಗೆ ಬೇಸರಿಕೆಗೆ ಆ ಗುಣವುಂಟು. ಈ ಕೃತಿಯ ಮೂಲಕ ಸಂತೋಷಕ್ಕೂ ಈ ಹಬ್ಬಿಕೊಳ್ಳುವ ಗುಣ ಒದಗಿ ಬರಲೆಂದು ಅವರಂತೆ ನನಗೂ ಆಸೆಯಾಗಿದೆ. ಇದರ ಸಾಫಲ್ಯಕ್ಕೆ ಈ ಮುನ್ನುಡಿಯಿಂದ ಎಷ್ಟು ಪ್ರಯೋಜನವಾಗುತ್ತದೋ ಕಾಣೆ.

ಕಾವ್ಯದಿಂದ ನಾವು ಬಯಸಬೇಕಾದ ಫಲವೇನು ಎಂಬ ವಿಷಯದಲ್ಲಿ ನಡೆದಿರುವ ನಡೆಯುತ್ತಿರುವ ಜಿಜ್ಞಾಸೆಗೆ ಕೊನೆಮೊದಲಿಲ್ಲ. ಕೆಲವರು ಅದರಿಂದ ಸಮಾಜದ ನಿರ್ಮಲೀಕರಣವನ್ನು ಬಯಸುತ್ತಾರೆ; ಕೆಲವರು ಅನ್ಯಾಯಗಳನ್ನು ಸುಟ್ಟುಹಾಕುವ ಬೆಂಕಿಯನ್ನು ಅದು ಕಾರಬೇಕೆನ್ನುತ್ತಾರೆ; ಮತ್ತೆ ಕೆಲವರು ಲೋಕ ತನ್ನ ಅಶ್ಲೀಲಗಳನು ಮುಚ್ಚಿಕೊಂಡು ಸಭ್ಯವಾಗುವುದಕ್ಕೆ ತಕ್ಕ ನೈತಿಕ ಮತ್ತು ತಾತ್ವಿಕ ಮುಚ್ಚುಮರೆಗಳನ್ನು ಅದು ತಯಾರುಮಾಡಬೇಕೆನ್ನುತ್ತಾರೆ. ಕೆಲವರಿಗೆ ಜಗತ್ತು ನಡೆಗೆಟ್ಟು ಕುಳಿತಿದೆ ಎಂಬ ಭ್ರಾಂತಿ—ಅವರು ಕಾವ್ಯದಿಂದ ಅಪೇಕ್ಷಿಸುವುದು ಕ್ರಾಂತಿಯನ್ನು—ನಗಾರಿಗಳ ಹೊಡೆತವನ್ನು, ಹೆದ್ದ ಹಾಕುವ ಹುಯಿಲನ್ನು, ಹೊರ್ಜಿಹಿಡಿದೆಳೆಯುವ ಬೊಬ್ಬೆಯನ್ನು. ಕೆಲವರಿಗೆ ಅದರ ಗತಿ ತೀರ ಮಂದ; ಕಾವ್ಯಪದಕ್ಕೆ ಕಾಂಗರುವಿನಂತೆ ಕುಪ್ಪಳಿಸುವುದನ್ನು ಕಲಿಸಬಾರದೇ ಎಂದು ಅವರ ಹಲುಬು. ಈ ವಾಂಛೆಗಳ ಜತೆಗೆ ಪರದ ಕಾವಳ ಬೇರೆ ಅದ್ಯತನ ಕವಿಯನ್ನು ಕಾಡುತ್ತದೆ. ಇವುಗಳ ಹೊಡೆತದಲ್ಲಿ ಕವಿ

ತನ್ನೊಬ್ಬನಿಗೆ ಮಾತ್ರ ಸಾಕ್ಷಾತ್ಕಾರ ಸಾಧ್ಯವಾದ ನೈಜಾನುಭೂತಿಗಳನ್ನವ ಲಂಬಿಸಿ, ಪರಾಭಿಭೂತಿಯನ್ನು ತಡೆದು, ಆತ್ಮಸ್ವಾತಂತ್ರ್ಯವನ್ನು ಗಳಿಸಿ ಕೊಂಡ ಹೊರತು ಸುರಕ್ಷಿತವಾಗಿ ಕಾವ್ಯಮಾರ್ಗಕ್ರಮಣವನ್ನು ಮಾಡಿ ಸಹೃದಯ ಹೃದಯವನ್ನು ತಲಪುವುದು ಕಷ್ಟ. ಭೌತಾವರಣದಲ್ಲಿ ದೇವರೂಪಗಳಂತೆ ಭಾವಾವರಣಗಳಲ್ಲಿ ಬಾಳಬೇಕಾದ ಕಾವ್ಯರೂಪ ಗಳೂ ಕೂಡ ದೇಶ ದೇಶಕ್ಕೆ ಕಾಲ ಕಾಲಕ್ಕೆ ತಕ್ಕಂತೆ ವ್ಯತ್ಯಾಸ ಹೊಂದು ವುದು ಸಹಜ. ಜನಗಳ ವಾಂಛೆಗಳಂತೆ ಈ ಚಿದಾವರಣವೇರ್ಪಡುತ್ತದೆ, ಮಾರ್ಪಡುತ್ತದೆ. ಹಾಗೆಯೇ ಕಾವ್ಯಗಳ ಬಾಹ್ಯರೂಪಗಳೂ ಅಲಂಕಾ ರಾದಿ ಪರಿಕರ್ಮಗಳೂ ಕೂಡ. ಕವಿ ವರ್ತಮಾನ ವಾತಾವರಣದಲ್ಲಿ ಬಾಳಬೇಕಾಗಿರುವುದರಿಂದ, ಶೈಲಿ ಶಬ್ದ ನಡಗೆ ಬೆಡಗುಗಳಲ್ಲಿ ಮಾತ್ರ ಲೋಕಶರಣ್ಯನಾಗಿ, ತನ್ನ ಆತ್ಮಕ್ಕೆ ವಂಚನೆಯನ್ನು ಮಾಡಿಕೊಳ್ಳದೆ ತನ್ನ ಕರ್ಮದಿಂದ ತನಗೆ ಸುಖ ಲಭಿಸಲೆಂದು ಬಯಸಿ ರಸಶರಣ್ಯನಾಗಿ ತನ್ನ ಕಾವ್ಯವನ್ನು ನಿರ್ಮಿಸಿದ ಪಕ್ಷದಲ್ಲಿ ಕೃತಾರ್ಥನಾಗುತ್ತಾನೆ. ಹಾಗಲ್ಲದೆ ಭಾವಗಳ ವಿಷಯದಲ್ಲಿಯೂ ಈತ ಪ್ರವರ್ತಮಾನಕ್ಕೆ ವಶ್ಯನಾದರೆ ಆತನ ಕೃತಿ ರಸಪ್ರದವಾಗುವುದು ಕಷ್ಟ. ಆದುದರಿಂದ ಕವಿಗಳು ಕ್ರಾಂತದರ್ಶಿ ಗಳು—ಆದದ್ದನ್ನು ಕಾಣತಕ್ಕಂಥವರು—ಎಂದು ನಮ್ಮ ಹಿಂದಿನವರು ಹೇಳುತ್ತಿದ್ದುದು. ಇದನ್ನೇ ಇನ್ನೊಂದು ತೆರದಲ್ಲಿ ಹೇಳಬಹುದಾದರೆ, ಅದ್ಯತನ ವಿಮುಕ್ತಿಯನ್ನು ತಾವಿಚ್ಛಿಸಿದಂದು ಪಡೆಯುವಂಥವರು ಕವಿ ಗಳಾಗುವುದಕ್ಕೆ ಅರ್ಹರು ಎಂದೆನ್ನಬಹುದು.

ಸದ್ಯಃಸ್ಫೂರ್ತಿಯಿಂದ ತಾನು ಹಿಂದೆ ಕೇಳಿ ಅನುಭವಿಸಿದುದರ ನೆನಕೆ, ಆ ಧ್ಯಾನದಿಂದ ಹೃದಯ ರಸಸೇಚನೆ, ಈ ಸೇಚನೆಯಿಂದ ಕಲ್ಪನೆಗಳು ಬಳ್ಳಿವರಿದು ಧ್ಯಾತ ವಿಷಯಗಳನ್ನು ಸೃಷ್ಟಿಸುವ ಕ್ರಮ, ಆ ಸೃಷ್ಟಿಯನ್ನು ಉಚಿತಾರ್ಥವುಳ್ಳ ಶಬ್ದಗಳಿಂದ ಬಹಿರಂಗಪಡಿಸುವ ಕೃತಿ—ಹೀಗೆ ಐಹಿ ಕಾನುಭವಗಳು ಕವಿ ಹೃದಯದಲ್ಲಿ ಮುಳುಗಿ ಅಲ್ಲಿಂದ ಮೇಲಕ್ಕೆದ್ದು ಬಂದು ಆತ್ಮರಸ ಸೇವನೆಯಿಂದ ಶಾಪವಿಮುಕ್ತಿಯನ್ನು ಪಡೆದ ಹೊರತು ಅವು ದಿವ್ಯವಾಗಲಾರವು. ಭವವಿಮುಕ್ತವಾಗಿ ಭವ್ಯವಾಗಲಾರವು, ದರ್ಶನ ಮಂಗಳವಾಗಲಾರವು. ಆದುದರಿಂದ ಕಾವ್ಯಭೋಗಿಗಳು ಪ್ರಚೋದಕ

ಮತ್ತು ಪ್ರಚಾರಕ ಸಾಹಿತ್ಯವನ್ನು ಕವಿಯಿಂದ ಅಷ್ಟಾಗಿ ಅಪೇಕ್ಷಿಸುವುದಿಲ್ಲ. ಅವರು ಕೃತಿಯಲ್ಲಿ ಅಪೇಕ್ಷಿಸುವುದು ರಸವಹನಗುಣವನ್ನು; ತತ್ತ್ವಾನ್ವೇಷಣೆಯನ್ನಲ್ಲ, ತತ್ತ್ವಪ್ರಚಾರವನ್ನಲ್ಲ, ಅದ್ಯತನರಾಗದ್ವೇಷ ನ್ಯಾಯಾನ್ಯಾಯ ಸುಖ ದುಃಖ ಪ್ರಾಚುರ್ಯೋದ್ಗಾರವನ್ನಲ್ಲ—ಭವಶಮನವನ್ನು ಬೆಂಕಿಯ ಕಾವನ್ನಲ್ಲ, ಕನ್ನಡಿಯಲ್ಲಿ ಜಾಜ್ವಲ್ಯಮಾನವಾಗಿ ಹೊಳೆಯುವ ಬೆಂಕಿಯ ಶೀತಲತೆಯನ್ನು. ಸಂಗೀತದಂತೆ ಕಾವ್ಯವೂ ಕೂಡ ವಾಸ್ತವ ಮೂರ್ತ ನಿರ್ಬಂಧವನ್ನು ಎಷ್ಟರಮಟ್ಟಿಗೆ ಕಳೆದುಕೊಂಡರೆ ಅಷ್ಟರಮಟ್ಟಿಗೆ ಅದು ಭೋಗ್ಯವಾಗುತ್ತದೆ, ದಿವ್ಯವಾಗುತ್ತದೆ. ತನ್ನ ಸ್ವರಗಳನ್ನು ಸಂಗೀತ ಹೇಗೋ ಹಾಗೆ ಶಬ್ದನಿಷ್ಠಾರ್ಥಗಳನ್ನು ಉಪಯೋಗಿಸಿಕೊಳ್ಳುವ ಕಾವ್ಯ ರಸದಲ್ಲಿ ನಿಷ್ಠವಾಗಿ ಆನಂದವಾಹಿಯಾಗುತ್ತದೆ. ಎಲ್ಲರ ವ್ಯಕ್ತಿತ್ವದಲ್ಲೂ ನಿಗೂಢವಾಗಿ ಅಮೂರ್ತವಾದ ಆತ್ಮವನ್ನು ಕಾವ್ಯೋಪಕರಣಗಳಿಂದ ಅಂಗೈನೆಲ್ಲಿಯಾಗಿ ಮಾಡುವ ಕವಿಯ ಕೃತಿ ವರ್ತಮಾನದಲ್ಲಿ ಜನ್ಮವೆತ್ತಿದ್ದರೂ ಅದರ ಸೆಳೆತಕ್ಕೆ ಸಿಕ್ಕಿಕೊಳ್ಳದೆ ಸಂತತ ವರ್ತಮಾನಕ್ಕೇರುತ್ತದೆ—ತನ್ನಲ್ಲಿ ತುಂಬಿಕೊಂಡಿರುವ ನಲವಿನ ಪ್ಲಾವಕ ಶಕ್ತಿಯಿಂದ. ಈ ನಲವಿನ ನೆರವು ಕೃತಿಗಳಿಗಿಲ್ಲದೇ ಹೋದರೆ, ಎಸೆಯುವವನ ಚಾಕಚಕ್ಯವನ್ನೆಡೆಗೊಂಡು ನೀರಿನಮೇಲೆ ಸ್ವಲ್ಪಕಾಲ ನೋಡುವವರಿಗೆ ವಿಸ್ಮಯವನ್ನು ತರುವಂತೆ ಚಕಚಕನೆ ಹಕ್ಕಿಯಂತೆ ಹಾರಿ ಮುಳುಗಿ ಹೋಗುವ ಕಲ್ಲಿನಂತೆ ಅವು ಮುಳುಗಿ ಹೋಗುತ್ತವೆ. ಇದಕ್ಕೆ ಉದಾಹರಣೆಯಾಗಿ ಸ್ವಾತಂತ್ರ್ಯ ದೊರೆಯುವುದಕ್ಕೆ ಮುಂಚೆ ನಮ್ಮ ದೇಶದ ದುರ್ದಶೆಯನ್ನು ಕುರಿತು ವಿಪುಲವಾಗಿ ಹುಟ್ಟಿದ ಕವನಗಳನ್ನು ತೆಗೆದುಕೊಳ್ಳಿ; ಆಗ ಅವು ಎಷ್ಟು ಮೋಹಕ, ಈಗ ಎಷ್ಟು ನೀರಸ! ಸಾಮಯಿಕ ಕೃತಿಗಳ ಗತಿಯೇ ಹೀಗೆ. ಆ ವೇಗಗಳು ಸ್ಫೂರ್ತಿ ಎಂಬ ಭ್ರಮೆಯನ್ನು ಕವಿಗೆ ತಂದರೆ ಆತ ಮರುಳಾಗಿ ಅವುಗಳ ವಶನಾಗದೆ ನಿಲ್ಲುವುದು ಕಷ್ಟ. ಬಿಳಿಗಿರಿಯವರ ಈ ಕವನ ಸಂಗ್ರಹದಲ್ಲೂ ಇಂಥ ಕೃತಿಗಳಿಲ್ಲದೆ ಇಲ್ಲ. ಆದರೆ ಹುಲ್ಲಿಲ್ಲದೆ ತೆನೆ ಬೆಳೆಯದು; ಫಲ ಸೀಕಲಾಗುವಷ್ಟು ಹುಲ್ಲು ಹುಲುಸದಂತೆ ನೋಡಿಕೊಳ್ಳಬೇಕು—ಇದು ಇದರ ಮರ್ಮ.

ಶ್ರೀಮಾನ್ ಬಿಳಿಗಿರಿಯವರ ಅನೇಕ ಕವನಗಳಲ್ಲಿ ನಲವನ್ನು ಹರಿ

ಸುವ ಗುಣವಿದೆ. ಅನುಭವಗಳ ತೀವ್ರತೆ, ಭಾವಗಳ ನೈಜತೆ, ಅವು ಧ್ಯಾನದಲ್ಲಿ ನೆನೆದು ಬರುವ ಬಗೆ, ಕಲ್ಪನೆಗಳ ಹೊಸತನ ಮತ್ತು ಸೊಗಸು ಶೈಲಿಯ ಆಧುನಿಕತೆ ಮತ್ತು ಸರಳತೆ ಈ ಗುಣಗಳಿಂದ ಅವು ಹೃದ್ಯವಾಗಿವೆ. ಕವಿ ಇನ್ನೂ ತರುಣರು. ಅವರ ಮನಸ್ಸು ತನ್ನ ತಾರುಣ್ಯವನ್ನೂ ಆರೋಗ್ಯ ವನ್ನೂ ಕಳೆದುಕೊಂಡಿಲ್ಲ. ಆಶ್ಚರ್ಯಕರವಾದ ರೀತಿಯಲ್ಲಿ ಅವರು ತಮ್ಮ ಮಿತಿಯನ್ನರಿತುಕೊಂಡು ಪ್ರವರ್ತಮಾನ ಆಧ್ಯಾತ್ಮಿಕ ಪರಿಭಾಷೆಗಳ ಉಪದ್ರವಗಳಿಂದ ಪಾರಾಗಿದ್ದಾರೆ. ಪ್ರಕೃತಿ ವರ್ಣನೆಗಳಲ್ಲೂ ಈಗ ಬಳಕೆಯಲ್ಲಿರುವ ದುರ್ನಿವಾರ್ಯವಾದ ಕವಿಸಮಯಗಳು ತಲೆದೋರಿಲ್ಲ. ಸುನೀತಗಳಲ್ಲೂ, ಬಿಡಿಕವನಗಳಲ್ಲೂ, ದೀರ್ಘಕವನಗಳ ಹಲಪಂಕ್ತಿ ಗಳಲ್ಲಾ ಬರುವ ಪ್ರಕೃತಿ ಚಿತ್ರಗಳು ಸ್ವಂತವೂ ಮನೋಹರವೂ ಆಗಿವೆ. ವಿಷಾದ, ಜುಗುಪ್ಸೆ, ನಿರಾಶೆಯ ನಿಟ್ಟುಸಿರು, ಇವು ಕಡಿಮೆ; ಇವು ಕಾಣಿಸಿ ಕೊಳ್ಳುವೆಡೆಯಲ್ಲೆಲ್ಲಾ ಆ ವಯಸ್ಸಿಗನುಗುಣವಾಗಿ ಬರುವ ತಾರುಣ್ಯದ ಹಸಿವು ನೀರಡಿಕೆಗಳಂತೆ ಅವು ಮಧ್ಯವಯಸ್ಸಿನ ನಮಗೆ ನಗೆಯನ್ನು ತರುತ್ತವೆ; ಆದರೆ ಕವಿಯ ವಿಷಯದಲ್ಲಿ ಆತಂಕವನ್ನು ತರುವುದಿಲ್ಲ. ಕವಿ ಹುರುಪುಳ್ಳವ, ನಗೆಬಗೆಯವ, ಆಶಾಪೂರ್ಣ, ಸರಸಿ, ಒಂದು ಕುಟುಕು ಮಳೆಯನ್ನು ಇಲ್ಲಿ ಕಂಡು ಭದ್ರಾವತಿಯ ಸುರಿಮಳೆಯನ್ನು ನೆನೆದುಕೊಳ್ಳುವುದು, ಇಲ್ಲಿನ ಒಣಕಟ್ಟೊಂದನ್ನು ನೋಡಿ ಅಲ್ಲಿನ ಆಲೆ ಮನೆಯೊಂದರ ಸಮೃದ್ಧಿಯನ್ನು ಧ್ಯಾನಿಸಿ ಆಪ್ಯಾಯನಗೊಳ್ಳುವುದು, ಅಂದು ಬಿಟ್ಟ ಊರಿನ ಸೌಖ್ಯ ಸೌಂದರ್ಯಗಳನ್ನು ಇಲ್ಲಿ ಲಹರಿ ಲಹರಿಗಳಾಗಿ ಬಿಡಿಸಿ ಉಲ್ಲಾಸಗೊಳ್ಳುವುದು—ಇಂಥ ಬಗೆ ಸಹಜ ಕವಿಗೆ ಮಾತ್ರ ಬರುವ ಬಗೆ. ಭದ್ರಾವತಿ ಸುಂದರವಾದ ಊರೆಂದು ಯಾರು ಧೈರ್ಯವಾಗಿ ಹೇಳಬಲ್ಲರು? ಇಂದಿಗೂ ಅದು ರೂಕ್ಷವೇ. ಆದರೆ "ಭದ್ರಾವತಿಯನ್ನು ಬಿಡುವಾಗ" ಎಂಬ ಸುನೀತದಲ್ಲಿ ಕವಿ ಅದಕ್ಕೆ ತನ್ನ ಹೃದಯ ರಸಸೇಚನೆಯಿಂದ ಎಂಥ ಸೌಂದರ್ಯವನ್ನು ಕೊಟ್ಟಿದ್ದಾನೆ! ಅದರ ಯಂತ್ರಾಗಾರದ ಚಿಮಣಿಗಳನ್ನು ಕಂಡರೂ ಕವಿಗೆ ಮೋಹ. ಮಳೆಯಾಗಲೀ ಬಿಸಿಲಾಗಲೀ, ಯಾವ ಸಮಯದಲ್ಲೂ ಅವು ಧೃತಿಗೆಡದೆ ಚರ್ಚಿಲ್ಲನ ಚುಟ್ಟದಂತೆ, ಸೋಮಾರಿಯ ಸಿಗರೇಟಿನಂತೆ

ಹೊಗೆಯನ್ನು ನಿರಾತಂಕವಾಗಿ ಬಿಡುತ್ತಾ ನಿಂತಿದೆ—ಹೌದು, ಪ್ರೇಯಸಿ ಯನ್ನುದ್ದೇಶಿಸಿ ತೋರಿಸುವಷ್ಟು ರಮ್ಯವಾಗಿವೆ—"ನಿಂದಿವೆ ಭದ್ರಾವತಿ ಯೊಳು ರಮಣಿ—ಗಗನವನೇ ತಿವಿಯುವವೊಲು ಹೊಗೆಯುಗುಳುವ ಚಿಮಣಿ." ಹೀಗೆಯೇ ರೈಲು, ಕಾರು, ಟಾರುರೋಡು ಇತ್ಯಾದಿ ಆಧು ನಿಕ ಯಾಂತ್ರಿಕ ಜಗತ್ತಿನ ಸೊಗಸುಗಳು ಕವಿಯ ಬಗೆಯಲ್ಲಿ ಬಿದ್ದೆದ್ದು ಮುದ್ದಾಗಿವೆ. ಈ ಕವಿಯ "ಸೋಮಾರಿ" ಎಂಬ ಪದ್ಯವನ್ನೋದಿ ನಾನು ಬಹುಸುಖಪಟ್ಟಿದ್ದೇನೆ. ಆ ಪದ್ಯದ ಕೊನೆಯ ಸಾಲು—ಅದ ರಲ್ಲೂ ಕೊನೆಯ ಪ್ರಾಸಶಬ್ದ—ನನ್ನನ್ನು ಚಮತ್ಕೃತನನ್ನಾಗಿ ಮಾಡಿತು.

ಇನ್ನೇತಕೆ ಬರಿ ಚರ್ಚೆಯು ಸಾಕು
ಓಡುವಿಳೆಗೆ ಸೋಮಾರಿಯೆ—

ಇಲ್ಲಿ ನನ್ನಂಥವನಿಗೆ ಹೊಳೆಯುವ ಶಬ್ದ "ಬೇಕು" ಎಂಬುದು. ಆದರೆ ಮಡಿ ಮೋಹವಿಲ್ಲದ ತರುಣ ನವ ಕವಿ ಬಿಳಿಗಿರಿಗೆ ಹೊಳೆಯುವ ಶಬ್ದ, ಆಧುನಿಕತಮ ಕವಿಗೆ ಮಾತ್ರ ಹೊಳೆಯುವ ಶಬ್ದ—

ಓಡುವಿಳೆಗೆ ಸೋಮಾರಿಯೆ ಬ್ರೇಕು

ನಿಶ್ಚಯ, "ಓಡುವಿಳೆಗೆ ಸೋಮಾರಿಯೆ ಬ್ರೇಕು." ನಿಜವಾದ ಕವಿ ಗಳೆಲ್ಲಾ ಅಂಥ ಸೋಮಾರಿಗಳು. ಈ ಮುನ್ನುಡಿಯಲ್ಲಿ ನಾನು ಮಾಡಿ ರುವ ಕಾವ್ಯಮೀಮಾಂಸೆಯೂ ಈ ಸಾಲುಗಳ ಸ್ಫೂರ್ತಿಯಿಂದಲೇ ಹುಟ್ಟಿ ತೇನೋ. ಪ್ರಕೃತಿಯ ಸೆಳತಕ್ಕೆ ಸಿಕ್ಕಿ ಅವಶನಾಗಿ ಸಂಸಾರದಲ್ಲಿ ಬಿದ್ದೆದ್ದು ಓಡುತ್ತಿರುವ ಭವಿಗಳಿಗೆಲ್ಲಾ "ಸೋಮಾರಿಯೆ ಬ್ರೇಕು." ಈ ಬ್ರೇಕಿಲ್ಲ ದಿದ್ದರೆ ಲೋಕ ಮುಗುಚಿಕೊಳ್ಳುವುದು ಖಂಡಿತ. ಮೊದಲು ತನ್ನ ವೈಚಿತ್ರ್ಯ ದಿಂದ ಈ ಶಬ್ದ ನಮ್ಮ ಗಮನವನ್ನು ಸೆಳೆಯುತ್ತದೆ, ವ್ಯಂಜನ ಶಕ್ತಿಯಿಂದ ಧ್ವನಿ ಪರಂಪರೆಗಳನ್ನೆಬ್ಬಿಸುತ್ತದೆ, ದರ್ಶನ ವಿಸ್ತಾರದಿಂದ ಕಲ್ಪನೆಯನ್ನು ಭವ್ಯತೆಗೇರಿಸುತ್ತದೆ. ಸಾಮಾನ್ಯವೆಂದು ನಾವು ಇನ್ನೇನು ಹಾಳೆ ಮಗುಚು ವಾಗ ಹೀಗೆ ನಮ್ಮ ಮನಸ್ಸನ್ನು ಸೆರಗುಹಿಡಿದು ನಿಲ್ಲಿಸಿ ನಲಿಸುವ ವಿಶೇಷ ಗುಣ ಬಿಳಿಗಿರಿಯವರ ಕೃತಿಯಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತದೆ. ಅವುಗಳನ್ನು ನಾನು ಬೆರಳಿಟ್ಟು ತೋರಿಸುವ ಅವಶ್ಯಕವಿಲ್ಲ. ಸಹೃದಯರ ಕಣ್ಣಿನಿಂದ ಅವು ಎಂತು ನುಣುಚಿಕೊಂಡಾವು ?

ಇಷ್ಟು ಸುಂದರವಾಗಿಯೂ, ಸರಳವಾಗಿಯೂ, ವೈಯಕ್ತಿಕವಾಗಿಯೂ, ನೈಜವಾಗಿಯೂ ಇರುವ ಕವನಗಳನ್ನು ನಿರಾಡಂಬರವಾದ ಶೈಲಿಯಲ್ಲಿ ಬರೆದ ಕವಿಯನ್ನು ಜನ ಮೆಚ್ಚಿಕೊಂಡರೆ ಅದು ಆಶ್ಚರ್ಯವೇನಲ್ಲ. ಈ ಮೆಚ್ಚುಗೆ ಕವಿಗೆ ಎಷ್ಟು ದೊರೆತರೆ ಅಷ್ಟು ಕವಿಯಿಂದ ಜನಕ್ಕೂ ಪ್ರಯೋಜನವಾಗುತ್ತದೆ. ಕವಿಯಿಂದ ಜಗತ್ತಿಗೆ ಸೌಂದರ್ಯ ಪ್ರಾಪ್ತಿ. ಸೌಂದರ್ಯದಿಂದ ಜನಕ್ಕೆ ಆನಂದಪ್ರಾಪ್ತಿ. ಆನಂದಕ್ಕಿಂತ ಅಮೃತವಾದ ಫಲ ಮತ್ತೊಂದೇನಿದೆ ? ಭವವಿಕಾರಗಳನ್ನೆಲ್ಲಾ ತನ್ನ ಹೃದಯದಲ್ಲಿ ಮಾಗಿಸಿ ಅದಕ್ಕೆ ಮಾಧುರ್ಯವನ್ನು ಕೊಟ್ಟು ಮರಳಿ ಜನಕ್ಕೆ ಕೊಡುವ ಕವಿಯನ್ನು ಜನ ಚೆನ್ನಾಗಿ ನಡೆಸಿಕೊಳ್ಳದೇ ಹೋದರೆ, ಆತನ ಒಂದು ಬಾಳು ಭಗ್ನವಾಗಬಹುದು ; ಅದರಿಂದ ಲೋಕಕ್ಕಾಗುವ ಭಂಗ ಅಮಿತ–ಶ್ರೀ ಬಿಳಿಗಿರಿ ಒಳ್ಳೆ ಯೋಗಶಾಲಿಯಾದ ನವ್ಯಕವಿ. ಆಧುನಿಕ ಕವನಗಳೆಂದರೆ ಅಂಜುವ ಈ ಕಾಲದಲ್ಲೂ ಕೂಡ ಈ ಕವನಗಳನ್ನು ಇಷ್ಟು ಚೆನ್ನಾಗಿ ಅಚ್ಚುಮಾಡಿಸಿ ಪ್ರಕಾಶಗೊಳಿಸಲು ಉತ್ಸಾಹಗೊಂಡಿರುವ ಮಿತ್ರರನ್ನು ಪಡೆದಿದ್ದಾರೆ. ಅವರನ್ನೂ ಅವರ ಆ ಮಿತ್ರರನ್ನೂ ನಾನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ. ಈ ಕೃತಿಯು ಜನಪ್ರಿಯವಾಗಿ, ಅದರಿಂದ ದೊರೆಯುವ ಉತ್ಸಾಹದಿಂದಲೂ ಉಲ್ಲಾಸದಿಂದಲೂ ಶ್ರೀಮಾನ್ ಬಿಳಿಗಿರಿಯವರು ಇನ್ನೂ ಅನೇಕ ಸುಂದರವೂ ವೈಯಕ್ತಿಕವೂ ನವ್ಯವೂ ಆದ ಕವಿತೆಗಳನ್ನು ಬರೆದು ಕನ್ನಡ ಜನಕ್ಕೆ ಆನಂದವನ್ನೆರೆಯುತ್ತಾ ತಾವೂ ಸಂಪನ್ನರಾಗಲೆಂದು ಹಾರೈಸುತ್ತೇನೆ.

ಬೆಂಗಳೂರು, ಇತಿಶಂ,

೩೦–೫–೧೯೫೨. **ಪು. ತಿ. ನರಸಿಂಹಾಚಾರ್.**

# ಕೃತಜ್ಞತೆ

ನಾನು ಕಳೆದ ಐದಾರು ವರ್ಷಗಳಿಂದ ಬರೆದ ಕವನಗಳೆಲ್ಲವನ್ನೂ ಇಲ್ಲಿ ಸೇರಿಸಿ ಪ್ರಕಟಿಸುತ್ತಿದ್ದೇನೆ. ಕಡೆಯ ನಾಲ್ಕು ಕವನಗಳನ್ನು ಬಿಟ್ಟರೆ ಅವುಗಳನ್ನು ಹೆಚ್ಚುಕಡಿಮೆ ಬರೆದ ಕ್ರಮದಲ್ಲೇ ಜೋಡಿಸಿದ್ದೇನೆ. ಇವುಗಳಲ್ಲಿ ಕೆಲವು ಈಗಾಗಲೇ ಜೀವನ, ಪ್ರಬುದ್ಧಕರ್ಣಾಟಕ, ಕನ್ನಡ ನುಡಿ, ಜನಪ್ರಗತಿ, ಶಕ್ತಿ, ಕೊರವಂಜಿ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಹೀಗೆ ಅವುಗಳಿಗೆ ಮೊದಲೇ ಎಡೆಯಿತ್ತ ಆ ಪತ್ರಿಕೆಗಳ ಸಂಪಾದಕರುಗಳಿಗೂ 'ಭದ್ರಾವತಿ' ಎಂಬ ಕವನವನ್ನು ಈ ಸಂಗ್ರಹದಲ್ಲಿ ಸೇರಿಸಲು ಅನುಮತಿಯಿತ್ತ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೂ ನಾನು ಕೃತಜ್ಞನಾಗಿದ್ದೇನೆ.

ಎಂಥ ಕವಿಗೇ ಆಗಲಿ ಸಕಾಲಕ್ಕೆ ಮಾರ್ಗದರ್ಶಕರು ಸಿಗಬೇಕು. ಸಿಗದಿದ್ದರೆ ಅವನು ಮುಂದುವರಿಯುವುದಿಲ್ಲವೆಂದಲ್ಲ; ಸಿಕ್ಕರೆ ಅನುಕೂಲವೆಂದರ್ಥ. ನನ್ನ ಭಾಗ್ಯವಿಶೇಷದಿಂದ ನನಗೆ ಅಂಥ ನೆರವು ಶ್ರೀಮಾನ್ ಪು.ತಿ.ನ. ಅವರಿಂದ ದೊರಕಿದೆ. ನನ್ನ ಕವನಗಳಿಗೆ ಒಂದು ರೂಪು ಕೊಟ್ಟವರು ಅವರು. ಬರೆದುದ್ದನ್ನೆಲ್ಲಾ ಓದಿ ಪ್ರೋತ್ಸಾಹವಿತ್ತವರು ಅವರು. ಉಪಯುಕ್ತವಾದ ಸಲಹೆಗಳನ್ನಿತ್ತವರು ಅವರು. ಒಟ್ಟಿನಲ್ಲಿ, ನನ್ನ ಕವನಗಳಲ್ಲಿ ಏನಾದರೂ ಗುಣವಿದ್ದರೆ ಅದಕ್ಕೆ ಕಾರಣರೆಂದರೆ ಅವರು. ಈ ಸಂಗ್ರಹಕ್ಕೆ ಮುನ್ನುಡಿಯನ್ನು ಬರೆದುಕೊಡಬೇಕೆಂದು ಕೇಳಿಕೊಂಡ ಕೂಡಲೇ, ಒಪ್ಪಿಕೊಂಡು, ವಿಚಾರಪ್ರಚೋದಕವೂ ಸ್ಫೂರ್ತಿದಾಯಕವೂ ಉತ್ತೇಜಕಾರಕವೂ ಆದ ಮುನ್ನುಡಿಯನ್ನು ದಯಪಾಲಿಸಿದ್ದಾರೆ. ಇದಕ್ಕಾಗಿ ನಾನು ಅವರಿಗೆ ಎಷ್ಟು ಕೃತಜ್ಞನಾಗಿದ್ದರೂ ಸಾಲದು.

ನನ್ನ ಕಾವ್ಯ ಬೆಳಗಲು ಸಹಾಯಕರಾದ ಮತ್ತೊಬ್ಬರೆಂದರೆ ಹಿರಿಯ ಗೆಳೆಯರಾದ ಶ್ರೀಮಾನ್ ಎಂ. ಗೋಪಾಲಕೃಷ್ಣ ಅಡಿಗ ಅವರು. ನನ್ನಲ್ಲಿ ಅವರು ವಿಶೇಷವಾದ ಅಭಿಮಾನವನ್ನು ತೋರಿದ್ದಾರೆ. ಅವರ ವಿಚಾರದಲ್ಲಿ ನಾನು ಹೆಚ್ಚು ಬರೆದರೆ ಅವರಿಗೆ ಅಸಮಾಧಾನವಾಗಬಹು

ದೇನೊ. ನಾನು ಇಲ್ಲಿರಬೇಕಾದರೆ ಮುದ್ರಣಾಲಯದ ಕಾರ್ಯಕಲಾಪಗಳ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ವಹಿಸಿಕೊಂಡು, ನೀರಸವಾದ ಮತ್ತು ಬೇಸರ ಹಿಡಿಸುವ ಕೆಲಸಗಳನ್ನೆಲ್ಲಾ ಹೆಗಲಮೇಲೆ ಹೊತ್ತುಕೊಂಡು ನನಗಾಗಿ ಬಹಳ ಶ್ರಮ ತೆಗೆದುಕೊಂಡಿದ್ದಾರೆ. ಅವರಿಗೆ ನಾನು ಬಹಳ ಕೃತಜ್ಞನಾಗಿದ್ದೇನೆ.

ಹೀಗೆಯೇ ಸಮಯೋಚಿತವಾಗಿ ಪ್ರೋತ್ಸಾಹವಿತ್ತಿರುವ ಶ್ರೀಯುತರುಗಳಾದ ತೀ. ನಂ. ಶ್ರೀಕಂಠಯ್ಯ, ಡಿ.ಎಲ್ ನರಸಿಂಹಾಚಾರ್, ಎಸ್.ವಿ. ಪರಮೇಶ್ವರ ಭಟ್ಟ ಮುಂತಾದ ಹಿರಿಯರು ಮತ್ತು ಗುರುಗಳಿಗೂ, ಸ್ನೇಹದ ಬೆಂಬಲವನ್ನಿತ್ತ ಶ್ರೀಮಾನ್ ಸಾಟೆ ಮಲ್ಲಿಕಾರ್ಜುನಯ್ಯ ಮುಂತಾದ ಗೆಳೆಯರಿಗೂ ನನ್ನ ವಂದನೆಗಳು.

ಹೊಟ್ಟೆಬಟ್ಟೆಗಳ ಚಿಂತೆಯಲ್ಲಿ ಕಲೆಗಳು ಹಿಂದೆ ಬಿದ್ದು ಪ್ರೋತ್ಸಾಹವಿಲ್ಲದೆ ನರಳುತ್ತಿರುವ ಈ ದುರ್ಭಿಕ್ಷಕಾಲದಲ್ಲಿ, ಅಷ್ಟೇನೂ ಪ್ರಸಿದ್ಧನಲ್ಲದ ಬರಹಗಾರನೊಬ್ಬನ ಮೊದಲನೆಯ ಕವನ ಸಂಕಲನವನ್ನು ಪ್ರಕಟಿಸಲು ಸಾಹಸದಿಂದ ಮುಂದೆ ಬಂದಿರುವ ಗೆಳೆಯನಾದ ರಾಜಶೇಖರನಿಗೆ ನಾನು ಬಹಳ ಋಣಿಯಾಗಿದ್ದೇನೆ.

ಕೊನೆಯದಾಗಿ, ಈ ಪುಸ್ತಕವನ್ನು ಇಷ್ಟು ಚೆನ್ನಾಗಿ ಅಚ್ಚುಮಾಡಿರುವ ಶ್ರೀಮಾನ್ ಜಿ. ಎಚ್. ರಾಮರಾಯರಿಗೂ ನನ್ನ ವಂದನೆಗಳು.

ಬೆಂಗಳೂರು
೧-೬-೫೨.

**ಬಿಳಿಗಿರಿ.**

# ಪ್ರಕಾಶಕರ ನುಡಿ

ದಿವಂಗತ ಬಿ. ಪಿ. ಹಾಲಪ್ಪನವರೇನೂ ಸಾಹಿತ್ಯಾಭ್ಯಾಸಿಯಲ್ಲ. ಅದರಲ್ಲೂ ಅವರಿಗೆ ಕಾವ್ಯವಿಹಾರ, ಕವಿತಾವಾಚನ ಹಿಡಿಸುತ್ತಿತ್ತೋ ಇಲ್ಲವೊ ಹೇಳುವುದು ಕಷ್ಟ. ಆದರೂ ಇಷ್ಟು ಹೇಳಬಹುದು, ಸಹಜವಾಗಿಯೇ ಕೋಮಲಮನಸ್ಕರಾದ ಅವರಿಗೆ, ಸುಂದರವಾದುದೆಲ್ಲವೂ, ಸತ್ಯವಾದುದೆಲ್ಲವೂ ಪ್ರಿಯವಾಗಿತ್ತು. ಆ ಒಂದು ಧೈರ್ಯದಿಂದಲೇ ಈ ಕವನ ಸಂಗ್ರಹವನ್ನು ಹೊರತಂದಿರುವುದು.

ತಮ್ಮ ಕವನಗಳನ್ನು ಸಂಗ್ರಹಿಸಿ, ಪ್ರಕಟಿಸಲು ಅನುಮತಿಯನ್ನಿತ್ತ ನನ್ನ ಆತ್ಮೀಯ ಗೆಳೆಯರಾದ ಶ್ರೀ ಬಿಳಿಗಿರಿ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

ಈ ಸಂದರ್ಭದಲ್ಲಿ ನನ್ನ ಹಿರಿಯ ಮಿತ್ರರೂ, ಗುಣವಂತ ಕವಿಗಳೂ ಆದ ಶ್ರೀಮಾನ್ ಎಂ. ಗೋಪಾಲಕೃಷ್ಣ ಅಡಿಗರಿಗೆ ನಾನು ವಿಶೇಷತಃ ಋಣಿಯಾಗಿದ್ದೇನೆ. ಸಂಗ್ರಹಕ್ಕೆ ಕವನಗಳನ್ನು ಆರಿಸುವುದರಿಂದ ಹಿಡಿದು ಕರಡು ಪ್ರತಿಯನ್ನು ತಿದ್ದುವವರೆಗೂ ಅನೇಕ ರೀತಿಯಲ್ಲಿ ನನಗೆ ಅವರು ನೆರವಾಗಿದ್ದಾರೆ. ಅವರಿಗೆ ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ.

ಈ ಕಾವ್ಯ ಸಂಕಲನಕ್ಕೆ ಮುನ್ನುಡಿಯನ್ನು ಬರೆದು, ಉಪಕಾರ ಮಾಡಿರುವ ಶ್ರೀಮಾನ್ ಪು. ತಿ. ನರಸಿಂಹಾಚಾರ್ ಅವರಿಗೂ, ಇದನ್ನು ಇಷ್ಟು ಸುಂದರವಾಗಿ ಅಚ್ಚುಮಾಡಿದ ಶ್ರೀ ಜಿ. ಎಚ್. ರಾಮರಾಯರಿಗೂ ನಾನು ಕೃತಜ್ಞ.

ಸಹೃದಯರೆಲ್ಲರೂ ಇದನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿದ್ದೇನೆ.

ಭದ್ರಾವತಿ<br>
೧೬-೬-೧೯೫೭

**ಬಿ. ಪಿ. ರಾಜಶೇಖರ**

# ಪ ರಿ ವಿ ಡಿ

# ತಿದ್ದುಪಡಿ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೨೯ | ೬ | ತುಂಬಿಸಿ ! | ತುಂಬಿಸಿ |
| ೩೩ | ೧೪ | ಚಪ್ಪರಿಸುತಿರೆ | ಚಪ್ಪರಿಸುತ್ತಿರೆ |
| ೪೭ | ೩ | ಕಾಂತಿಯಂಥದು ! | ಕಾಂತಿಯೆಂಥದು! |
| ೫೭ | ೨೨ | ಬಿತ್ತುವ | ಬಿತ್ತುತ |
| ೬೦ | ೧೭ | ದಂತದಾಡಿವವು | ದಂತದಾಡಿಮವು |
| ೬೩ | ೫ | ಬಿರುವೆರಲ | ಬಿರುವೆಲರ |
| ೬೪ | ೧೭ | ಹೊಂಬಿಸಲು | ಹೊಂಬಿಸಿಲು |

# ಮಿಂಚುಹುಳು

ಕಾರಿರುಳ ಜೊತೆ ಸೇರಿ
ಕಣ್ಗೆ ಮಂಕನು ತೂರಿ
ಕಂಡಿತಹ ನನಗೊಂದು ಮಿಂಚುಹುಳುವು.

ಕತ್ತಲಿನ ಕಡಲಿನೊಳು
ತೇಲ್ವ ಕಿರುದೋಣಿಯೊಳು
ಮಂಕಾಗಿ ಮಿನುಗುತಿಹ ಹಣತೆಯೇನೋ

ಇರದು ! ಎಂದಿಗುಮಿರದು !
ನಿಶೆಯ ಜಡೆಯೊಳು ಮೆರೆದು
ಹೊಳೆಯುತಿಹ ವಜ್ರದಾಭರಣವೇನೋ.

ನಿಶೆಯು ಹಬ್ಬಿರೆ ಸುತ್ತ
ಬೆಳಕ ಹನಿಯಳುಕುತ್ತ
ಸುಳಿವನೀಯದ ತೆರದಿ ಚಲಿಪುದೇನೋ

ಉಡುವೊಂದು ನೆಲೆ ತಪ್ಪೆ
ಮತ್ತೆ ಗಗನವನಪ್ಪೆ
ತವಕದಿಂ ಕಾತರಿಸುತಿರುವುದೇನೋ

ತನ್ನ ಹಿರಿಮೆಯ ಸಾರೆ
ಆ ಕಾರಿರುಳ ನೀರೆ
ಕಣ್ಣ ಮಿಟುಕಿಸಿ ಮಿಂಚುತಿರುವಳೇನೋ

ಎಲ್ಲಕೂ ಮರುಳಾಗಿ
ಬಾಯ್ಬಿಡುವ ಕವಿಗಾಗಿ
ಮಿಂಚುಹುಳುವಿದನು ವಿಧಿ ಸೃಷ್ಟಿಸಿದನೋ.

# ಕಬ್ಬು

ಒಲವಿನರಸಿಗೆ ಮುತ್ತ-
    ನಿಡೆ ಪ್ರಿಯನು ಬರಲು
ತಪ್ಪಿಸಲು ನಾಣವಳ
    ತನು ಬಳುಕಿಸಿರಲು,
ಪ್ರಿಯನ ತುಟಿಗಾಸರೆಯ-
    ನೀಯದೊಲು ಚೆನ್ನೆ
ತಲೆದೂಗುತಿರೆ ಕುರುಳು
    ಹಾರುತಿಹುದೆನ್ನೆ,
ಮೃದು ಸಮೀರನು ಮುತ್ತ-
    ನೊತ್ತಲ್ಕೆ ಬರಲು
ಕಬ್ಬು ಬಳುಕುವುದಹಹ
    ಗರಿಯೊಲೆಯುತಿರಲು !

# ಕಲಾವಿದನ ಸಾವು

" ಮತ್ತ್ರವನ ಬೆರಳುಗಳ ಸ್ಪರ್ಶಸುಖ ಸಿಗದೆನಗೆ "
ಎಂದು ಕೂದಲ ಕಿತ್ತುಕೊಳುತ ಕುಂಚ
ಮಿಲಮಿಲನೆ ಹೊರಳಾಡಿ ಮೌನದೊಳೆ ಮರುಗುತಿದೆ
ಸಂಕಟವು ಮೀರುತಿರಲಳಲಿನಂಚ !

" ಅರ್ಧಕೇ ನಿಲಿಸೆನ್ನ ನಗಲಿದನು ಚಿರಕಾಲ
ನಡುನೀರಿನೊಳೆ ಕೈಯ್ಯಬಿಟ್ಟನೆಂ"ದು
ಎನಗಕಾಲದ ಮರಣವೇತಕೆನ್ನುತ ವಿಧಿಯ
ದೂರುತಿದೆ ಅರೆಮುಗಿದ ಚಿತ್ರವೊಂದು !

# ಕೆಮ್ಮಣ್ಣುಗುಂಡಿಯಲ್ಲಿ

ಎಲ್ಲಿ ನೋಡಲಲ್ಲಿ ಕಣ್ಣು
ಕಾಣುತಿಹುದು ಕೆಮ್ಮಣ್ಣು !
ಸುತ್ತ ಮುತ್ತ ನೋಡು ಮಿತ್ರ
ಪ್ರಕೃತಿಯಿಾ ಕೃತಿ ವಿಚಿತ್ರ !

ತನ್ನ ರೂಪ ತಾನೆ ನೋಡಿ
ಮೆಚ್ಚಿ ಮೋದದಿಂದ ಹಾಡಿ
ಸುರಿಸುತಿಹಳೊ ಪ್ರಕೃತಿಮಾತೆ
ಕಣ್ಣನೀರನೆಂಬೊಲೊರತೆ—
ಯೊಂದು ನೋಡು ಬೀಳುತಿಹುದು !
ನೊರೆಯ ನಗೆಯು ಏಳುತಿಹುದು !
ಇದೋ ! ನುಣುಪುಕಲ್ಲ ನಲ್ಲ
ಮುತ್ತನಿಡಲು ನಿಲಲು ಗಲ್ಲ
ತಿರುಗಿಸಿದೊಲು, ಕೊಂಚ ಬಳುಕಿ,
ಆದರ ಆಸೆ ಮುರಿಯಲಳುಕಿ
ಮತ್ತೆ ಬಂಡೆಯನೇ ತಬ್ಬಿ-
ತೆನ್ನೆ ಬಳಸಿರುವುದು ಉಬ್ಬಿ !
ಇದರ ಗಾನವೆಷ್ಟು ಇಂಪು !
ಹಾ ! ಕೊರೆವುದಿದರ ತಂಪು !
“ ಆ ಮಂಜುಗಡ್ಡೆಯು
ಬಿಸಿಯು ” ಎಂಬಸಡ್ಡೆಯು !

ಕೆಳಗೆ ಕಮರಿಯಾಳದಲ್ಲಿ—
ಅಲ್ಲ–ಪಾತಾಳದಲ್ಲಿ
ಕೊಂಚ ನೋಡು !
ಬಗ್ಗಿ ನೋಡು !
ಪ್ರಕೃತಿಯೆಂತು ವಿವಿಧ ವರ್ಣ

ಮೇಳದಿಂದಲೊಂದವರ್ಣ-
ನೀಯವಾದ ಚಿತ್ರವನ್ನು
ರಚಿಸುತಿಹಳು ! ರಾಸಿ ಹೊನ್ನು
ಸುರಿದರೂ ಇಂಥ ಚಿತ್ರ
ದೊರೆವುದೇನು ನೋಡು ಮಿತ್ರ !
ಅದೋ ! ಅಲ್ಲಿ ದೂರದಲ್ಲಿ
ಭೂಮಿ ಬಾನು ಸೇರುವಲ್ಲಿ
ಹೊಂಬಿಸಿಲಿಗೆ ಮಂಜಕೂಡಿ
ಪ್ರಕೃತಿಯೊಡನೆ ಸ್ಪರ್ಧೆ ಹೂಡಿ
ಸಪ್ತವರ್ಣಧನುವನೆಂತು
ಧರಿಸುತಿರುವನಹಾ ಕಂತು !

ಇತ್ತ ಕೆಳಗೆ ನಮ್ಮ ಎದುರು
ರಾಸಿ ಕೆಂಪು ಬಣ್ಣದದಿರು
ಕಾಣುತಿಹುದು ಚುಕ್ಕಿಯಂತೆ
ಸುತ್ತಲಿರಲು ಹಸಿರ ಸಂತೆ !
“ ಚೆಲುವೆ ವಸುಂಧರೆಯ ನೆತ್ತಿ-
ಯೊಳಗಿಹುದೋ ಒಂದು ಮುತ್ತಿ,
ಪಚ್ಚೆಹಸಿರ ಸೀರೆಯುಟ್ಟ
ತಿರೆಯ ಹೆಣ್ಣು ಮೂಗಬೊಟ್ಟ-
ನಾಳಿ ಮೆರೆಯುತಿರುವ ಕೆಂಪೊ
ಕುಂಕುಮದ ಬೊಟ್ಟ ಕೆಂಪೊ ”
ಎಂದು ಮನವು ಭ್ರಮಿಪುದು
ಪ್ರಕೃತಿಗಿಂತು ನಮಿಪುದು !

ಅದಂತಿರಲಿ ಇತ್ತ ಬಂದು
ಕಾಲನೆಂತೊ ಕಿತ್ತು ತಂದು

ಸೊಬಗ ಮಡಿಲನೆಂತೊ ಬಿಟ್ಟು
ಮೌನವನ್ನು ಬೀಳ್ಕೊಟ್ಟು
ಯಂತ್ರ ಜಗದಿ ಮನವಿಡು
ಮೂಗ ಮೇಲೆ ಬೆರಳಿಡು !

ಸಮುದ್ರದೊಳೆ ಮರೆಯಾಗುವ ಹಡಗೊಲು
ಬೆಳಗೊಳು ಕ್ಷೀಣಿಪ ನಕ್ಷತ್ರದವೊಲು
ರೈಲ ಹಿಂದಿರುವ ಕೆಂಬೆಳಕಿರುಳೊಳು
ಮೆಲುಮೆಲ್ಲನೆಯೇ ನಶಿಸುವ ತೆರದೊಳು
ಬಾನಿಗಳೆಲ್ಲಾ ತೆರಳಿದವು
ಅದಿರನು ಸುರಿಯುತ ಮರಳಿದವು !
ಸೋಲುವೆ ಬಾಯೊಳೆ ಬಣ್ಣಿಸಲೆಳಸಿ !
ಏನುಪಯೋಗವು ಉಪಮೆಯ ಬೆಳಸಿ ?

ಇತ್ತ ಬುವಿಯು ಬಸಿರ ಬಗೆಯೆ
ಚೆಲುವನೆಲ್ಲ ಕಿತ್ತೊಗೆಯೆ
ರಕ್ತ ಬಸಿಯುತಿರುವುದು
ಎನ್ನೆ ಕುಸಿಯುತಿರುವುದು
ಕೆಮ್ಮಣ್ಣು ರಾಸಿಯಾಗಿ
ಕಣ್ಣೆರಲು ರೋಸಿಹೋಗಿ

ಅಯ್ಯೊ ! ನಾನೆಂಥ ಮರುಳ
ಆ ತೊರೆಯ ಹಾಡ ತಿರುಳ
ಕೊಂಚವೂ ತಿಳಿಯದೆ
ಪ್ರಕೃತಿ ಸುರಿವ ದುಃಖ ಬಾಷ್ಪ-
ವನ್ನೆ ಆನಂದ ಬಾಷ್ಪ-
ವೆಂದು ಏನು ತಿಳಿಯದೆ,
ಇದರ ತಂಪು
ಸಾವ ತಂಪು

ಎಂಬುದನ್ನೆ ತಿಳಿಯದೆ
ಏನೇನೊ ಗಳಹಿದೆ!

ಇಂತು ಮನವು ವಿವಿಧ ಭಾವ—
ಗಳಿಗೆ ಇಂಬನೀಯುತಿರೆ
ಬೆಟ್ಟವಿಳಿಯುತಿದ್ದೆವಾವು
ರೈಲೆಮಗೇ ಕಾಯುತಿರೆ!

# ಕಣ್ಣು ಮಿಂಚು

“ ನನ್ನ ಮುಂದೆ ನೀನು ಸಪ್ಪೆ ! ”
ಎನುವ ತೆರದಿ ಅಲುಗೆ ರೆಪ್ಪೆ,
“ ನಿನ್ನ ಬೆಳಕು ಬರಿಯ ಥಳಕು !
ನಿನ್ನ ಮುಂದೆ ನನಗೆ ಅಳುಕು ? ”

ಎಂದು ‘ ಕಾರ ’ ಬೆಳಕಿನಲ್ಲಿ
ಕೊಂಕು ನಗೆಗಳನ್ನು ಚೆಲ್ಲಿ
“ ನಿನ್ನ ಬೆಳಕದೇನು ಮಹಾ ! ”
ಎಂದು ಜರೆದು ಮಿಂಚಿತಹಾ :

ಅವಳ ಆ ಬೊಗಸೆಗಣ್ಣು !
ಅದರ ಮುಂದೆ ಜಗವೆ ಮಣ್ಣು !

# ದುಂಬಿಯ ನುಡಿ

ಹೂವೆಂದಿತು : " ನನ್ನಿಂದಲೆ
ನೀ ಜನಿಸಿದೆ ಹಣ್ಣೆ ! "
" ಬಾಯ್ಮುಚ್ಚೆಲೆ ನನ್ನಲ್ಲಿಹ
ಬೀಜವು ಬರಿ ಮಣ್ಣೆ ? "
ಇಂತಿರೆ ಬಂಡುಣಿಯೆಂದಿತು :
" ಓ ಗೆಳೆಯರೆ ಇಂತು
ವಾದಿಸುತಲಿ ನನ್ನಿರವನೆ
ಮರೆವಿರಿ ನೀವೆಂತು ? "

# ಬಿಳಿಗಿರಿಯ ಕಮರಿ

ಎಷ್ಟು ಕ್ಷುಲ್ಲಕಮಾಗಿ ಕಂಗಳಿಗೆ ತೋರುತಿದೆ
ಕೆಳಗಿನ ಜಗತ್ತು ನಾನೊರಗಿದೀ ಬಂಡೆಗಳ
ಪೀಠದಿಂ! ಹಸುರು ಬಣ್ಣದ ಹತ್ತಿಯುಂಡೆಗಳ
ವೊಲ್ಲು ತೋರಿ ತರುರಾಜಿಯಿದು ಮಂಕ ತೂರುತಿದೆ
ತಳವ ನೋಡುತಲಿರುವ ನನ್ನ ಕಣ್ಣುಗಳಂಜೆ!
ಅದೊ! ಸುದೂರದ ಗಿರಿಗೆ ಹಾವಿನೊಲು ರೂಹಾಂತು
ಕಾಳ್ಗಿಚ್ಚು ಅಗ್ನಿಸೋಪಾನವನು ತಾನೆಂತು
ರಚಿಸಿ ರಂಜಿಪುದಹಾ! ಅಗೊ ಅಗೋ! ಮುಚ್ಚಂಜೆ
ಹಡೆದಳೋ ದಿವ್ಯಶಿಶುವಂ, ಬೆಳಕ ಸುಧೆಯಿಂದ
ಹೆಪ್ಪುಗಟ್ಟಿದ ಕೆನೆಯೊ ಎಂಬವೊಲು ಪೆರೆಯುದಿಸಿ
ಕಮರಿಯಾಳದ ಬಸಿರ ಪುರುಳ ಪರಿಕಿಸಲೆಳಸಿ
ಶೀತಕಿರಣಗಳಟ್ಟುತೇರಿದನು ಜವದಿಂದ!
ಪ್ರಕೃತಿ ಕವಯಿತ್ರಿಯೊವ್ಮೊವ್ಮೆ ರಚಿಸುವ ಹಾಡು
ಮರೆಯಲಾಗದ ಮಧುರ ತಾನಗಳ ನೆಲೆವೀಡು!

# ಪ್ರಶ್ನೆ—ಉತ್ತರ

" ಟಿಕ್ ಟಿಕ್ ಟಿಕ್ ಟಿಕ್ ಎನ್ನುತಲೇನನು
ಒರೆಯುತಲಿಹೆ ಓ ಗಡಿಯಾರ ? "
" ನಿನ್ನಾಯುಷ್ಯದಿ ಸವೆಯುತ್ತಿಹ ಚಣ-
ಗಳನಿಂತೆಣಿಪನು ನಾನು ನರ ! "

# ಕನಸಿನಲ್ಲಿ

ಮದುವೆಮನೆ ಗಡಿಬಿಡಿಯೊಳೆಂತೊ ವಧುವಿಗೆ ಬಿಡುವು
ದೊರೆತಿರಲು, ನೆರೆದ ಜನ ಮುಂದಿನದ ಯೋಚಿಸಿರೆ
ಆಗೆನ್ನ ಕೋಣೆಗಾರೋ ಬಂದು, ಕುಸಿಯುತಿರೆ
ಅಸಿನಡುವು, ಹೆಚ್ಚುತಿರೆ ಕಣ್ಣನೀರಿನ ಮಡುವು
ಎನ್ನನಪ್ಪಿದಳಲಾ! ಕಣ್ಣತೆರೆದರೆ ಹೆಣ್ಣು!
"ಓ! ನಲ್ಲ! ನೀನು ಕಟ್ಟುವ ತಾಳಿಯನ್ನಿಗರು
ಕಟ್ಟಿದರು! ದೊರೆವರೇ ನಿನ್ನ ತೆರ ಚೆನ್ನಿಗರು?"
ಎಂದೊರೆಯೆ ಕನಸೊಡೆದು ನಿಶೆಯ ವರಿಸಿತು ಕಣ್ಣು!
ಹೇ! ಸ್ವಪ್ನದೇವತೆಯೆ! ನಿನ್ನ ಜಾಣ್ಮೆಗೆ ಸರಿಯ
ಕಾಣೆ ನಾಂ! ಆ ಚದುರೆ ನಿದ್ದೆವೆಣ್ಣಿನ ತೋಳ
ಬಿಗಿತೆಕ್ಕೆಯಿಂದೆಂತೊ ಸಡಿಲಿಸುತ್ತೆನ್ನತುಳ
ಜಾಣ್ಮೆಯಿಂ, ಪ್ರಿಯೆಯ ಮಧುರಾಲಿಂಗನದ ಸಿರಿಯ-
ನಿತ್ತೆ. ಮರುಚಣವೆ ಅದನೆಳೆದು ಬಿಡಿಸುತ ಕಿತ್ತೆ!
ಎಂದು ಕಾಂಬುದು ನಾನು ಆ ಕನಸನೇ ಮತ್ತೆ?

# ಉತ್ತರ

“ ನೀನು ದೂರದೊಳಿರಲು ನಿನ್ನ ಯೋಚನೆಯೊಂದೆ
ಅಗ್ನಿಯೊಲು ದಹಿಸುವುದು ದೇಹವನ್ನೆ
ನೀನು ಬಳಿಯಿರೆ ನಿನ್ನನಪ್ಪಿ ಮುತ್ತಿಟ್ಟರೂ
ಸುಡೆಯೆನ್ನ ; ಅಚ್ಚರಿಯಿದೇನು ಚೆನ್ನೆ ? ”

“ಅಗಲಿಕೆಯ ಶೋಕಾಗ್ನಿ ಎದೆಯೊಳಿರೆ, ಯೋಚನೆಯ
ಗಾಳಿಯುರುಹುವುದನ್ನೆ ಮರೆಯಬೇಕೆ ?
ನಾನು ಬಂದಿಹ ಸುಖದ ತಂಪು ಹೊತ್ತೊಳು ನಿಮಗೆ
ನನ್ನೊಲುಮೆ ಕಿಡಿಬೇಡ, ನಾನೆ ಸಾಕೆ ? !”

# ಒಂದಿರುಳು

ತಿರೆಯೊಳೆಲ್ಲೆಡೆ ಕರಿಯ ಮಸಿಯನು
ನಿಶೆಯ ಭೂತವು ಎರಚಿತು
ತರುಗಳೊಳು ತಮ ತೂಕಡಿಸುತಿರೆ
ಮಿಂಚು ಗಗನವ ಪರಚಿತು.

ಮಿಂಚ ಚಾವಟಿಯೇಟ ತಡೆಯದೆ
ತಮದ ತೇಜಿಯು ಭರದಲಿ
ಓಡಲೆದ್ದಿಹ ಧೂಳ ತೆರದಲಿ
ಮೋಡ ಹಬ್ಬಿದೆ ನಭದಲಿ.

ಬಾನ ಕಳಶವು ಮಿಂಚಿನೇಟಿಗೆ
ಬಿರಿದು ಅಮೃತದ ಕಣಕಣ
ಸೋರುತಿಹವೊಲು ಕಾಂಬುದೆನಗೀ
ನಭದಿ ರಾಜಿಪ ಉಡುಗಣ!

ಇರದು ; ನಭದುಪ್ಪರಿಗೆಯೇರುತ
ಬಗ್ಗಿ ತಿರೆಯೆನು ಬೆರಗೊಳು
ನಿಟ್ಟಿಸುತ್ತಲಿ ಮಿಂಚುತಿರುವುವು
ಅಪ್ಸರಸಿಯರ ಕಂಗಳು!

ದಿಶೆಯು ಬೆಳಗಲು, ನಿಶೆಯು ಬೆದರುತ
ಬಿಳಿಚುಗೊಳ್ಳಲು, ಚಂದ್ರನು
ಉದಿಸುತಿರುಳಿನ ಸೆರೆಯ ಹರಿದನು
ಅದೆಕೊ ತಾರೆಗಳಿಂದ್ರನು!

ಕಸವು ಬೆರೆತರು, ಪುಟಕೆ ಹಾಕಿದ
ಹೊನ್ನಿನುಂಡೆಯ ತೆರದಲಿ
ಕಾಂತಿಗುಂದದೆ ಇರುಳ ಸಂಗದಿ
ಏರುತಿಹನದೊ ಭರದಲಿ!

೧೫

ಪ್ರಿಯನ ಬರವಿಗೆ ನಾಚಿ ಮರೆಯಹ
ಮುಗ್ಧ ಚೆಲುವೆಯ ತೆರದೊಳು
ಮುಗಿಲ ಸೆರಗೊಳು ಹೊಕ್ಕವೆಷ್ಟೋ
ತಾರೆಗಳು ಬಹು ಭರದೊಳು !

ಇಂತು ವರ್ಧಿಸುತಿರಲು ಎಲ್ಲೆಡೆ
ಜ್ಯೋತ್ಸ್ನ-ನಿಶೆಗಳ ಕೇಳಿಯು
“ ಮರುಳೆ ಎಚ್ಚರು ” ಎಂದು ನಗುತಲಿ
ಬೀಸಿತಹ ತಂಗಾಳಿಯು !

# ಕಾಗೆಗೆ

" ಕಾಗೆಯಂತೆಯೆ ಬಣ್ಣ ಆ ನರ ಪ್ರಾಣಿಗಹ ! "
ಎನ್ನುವರು ಕರಿಯರನು ಜನರು ಕಂಡು
" ಆಹ ! ಆಕೆಯ ಕೇಶ ಕಾಗೆಯೊಲೆ ಕಪ್ಪೆ"ಂದು
ಬಣ್ಣಿಸರು ! ಜನರ ಮತಿಯೆಷ್ಟು ವೊಂಡು !

ಅಹುದು ! ದಿಟ ! ನೀನೇನೊ ಕೊಂಚ ಕಪ್ಪಿರಬಹುದು !
'ಅತಿಕಪ್ಪು' ಎಂಬ ನುಡಿ ಸುಳ್ಳ ಸಂತೆ !
ನಿನ್ನ ಕಪ್ಪಿನ ಮೊಗಕೆ ಕಪ್ಪುಬಳಿಯುವ ಕಪ್ಪು
ಈ ಜಗದೊಳಿರಲು ನಿನಗೇಕೆ ಚಿಂತೆ ?

ನಿನ್ನದೇ ಠೀವಿಯೊಳು ಕೊರಳ ಬಿಳಿಗೆರೆಯ ನೀ
ಎಡೆಬಿಡದೆ ಕುಕ್ಕುತಿಹೆ ಕತವದೇನು ?-
ಅದನು ಕೃಷ್ಣನು ಧರಿಪ ವೈಜಯಂತಿಗೆ ಜನರು
ಹೋಲಿಸರದೇಕೆಂಬ ಕೋಪವೇನು ?

ನಿನ್ನ ರೂಪೊಳೆ ಬಂದು ಸತ್ತವರು ಪಿಂಡಗಳ
ಸ್ವೀಕರಿಸುತಿರಲು ನಿನಗೇನು ಕೊರತೆ ?
ನಿನ್ನ ನೋಡುತಲಿರಲು ಸ್ಫೂರ್ತಿಯುಕ್ಕುವುದಮಮ !
ಎಂದಿಗೂ ಬತ್ತದಲ ಭಾವದೊರತೆ !

ಮಾಂಸದೊಂದೇ ತುಂಡ ಕಂಡರೂ ನೀ ಕರೆದು
ನಿನ್ನ ಗೆಳೆಯರಿಗೆಲ್ಲ ಕೊಡುವೆ ಪಾಲು
ಕೂಲಿಗಳಿಗೀಯದೆಯೆ ಎಲ್ಲ ನುಂಗುತಲಿರುವ
ಕ್ಯಾಪಿಟಲಿಸ್ಟರಿಗಿಂತ ನೀನೆ ಮೇಲು !

ಸರ್ವಗುಣ ಪರಿಪೂರ್ಣನಾರಿಹನು ಧರೆಯೊಳಗೆ ?
ಅದರಿಂದ ಸಹ್ಯವೆಲೆ ನಿನ್ನ ಕಂತ
ಸರ್ವಗುಣಸಂಪನ್ನ ಏಕಗುಣಹೀನನಾ
ಟ್ರಾಜೆಡಿಯ ನಾಯಕನು ನಿನ್ನ ನಂಟ !

ಸವಿಗೊರಲು ನಿನಗಿಲ್ಲವಾದರೇಂ ವಾಯಸವೆ ?
ನೀನೀವ ಕಾವಿಲ್ಲದಿರಲು ಪಿಕವು
ಮೊಟ್ಟೆಯೊಡೆದೀ ಜಗದಿ ಹಾಡಲೆಂದಿಗುಮರಿದು
ಕ್ಷನ್ಮ್ಯವದರಿಂ ನಿನ್ನ ಘೋರ ಸ್ವರವು !

"ಗುಣವಿಲ್ಲ ವಸ್ತುವೊಳೆ, ಕಾಂಬ ಹೃದಯದೊಳಿಹುದು"
ಎಂದು ಭಾರವಿ ಕವಿಯು ನುಡಿದನಂದೇ !—
ಎಷ್ಟು ದಿಟವೀ ಮಾತು ? ಕವಿಧಾತ್ರಿ ನಿನಗೊಲಿದೆ
ಇಂತು ಸವಿಮಾತುಗಳ ಮುಡಿಪ ತಂದೆ !

# ಆರಿದಾರಿದು ?

ಆರಿದಾರಿದು ಕರಿಯ ಅಂಚಿನ
ಬಿಳಿಯ ಸೀರೆಯ ಕನ್ನೆಯು
ತುಂಬು ಜವ್ವನವನ್ನೆ ಬಿಂಬಿಪ
ನುಣುಪು ಕೆನ್ನೆಯ ಚೆನ್ನೆಯು ?

ಕರಿಯ ಮೋಡದ ಮೇಲೆ ಥಟ್ಟನೆ
ಸುಳಿದು ಮೆರೆಯುವ ಮಿಂಚೊಲು
ಕಾಡಿಗೆಯ ಕಣ್‌ತುದಿಯೊಳಹಹಾ !
ಕಣ್ಣ ಮಿಂಚಿನ ಗೊಂಚಲು !

ಕಂಗಳೆಸೆಯುವ ಮಿಂಚಕುಡಿಗಳ-
ನೆಲ್ಲವೊಂದೆಡೆ ಹೀರುತ
ಕೂಡಿಸಿಟ್ಟೊಲು ನತ್ತು ಮೂಗಿನೊ-
ಳಿಹುದು ನಗೆಯನು ಬೀರುತ !

ಪ್ರೇಮ-ಸರದೊಳು ಕೊಂಕುನಗೆಗಳ-
ನೊಯ್ವ ದೋಣಿಯು ಚೆಂದುಟಿ !
ಮುಂದೆ ಬರಲಿಹ ಮುತ್ತುಗಳ ನೆನೆ-
ದಿಂದೆ ನಾಚಿದೆ ಕೆಂದುಟಿ !

ರತಿಗೆ ಚೆಲುವೊಳು ರತಿಯೆ ಸಾಟಿಯು ;
ಬೆಲ್ಲದೊಲೆ ಸವಿ ಬೆಲ್ಲವು ;
ಅಂತೆಯಿಾಕೆಯ ಚೆಲುವು ಮೂಟಗ-
ಳೂಟಿಯೆನಿಪೀ ಗಲ್ಲವು !

ಮದನ ಮಾಲಿಯು ರವಿಕೆ ಬೇಲಿಯು
ಜನರ ಮನಗಳೆ ಹೊಲಗಳು !
ತುಂಬಿದೆದೆಗಳು ದೇಹ-ಲತೆಯೊಳು
ಬಿಟ್ಟ ಸುಮಧುರ ಫಲಗಳು !

ಕಾಣೆನೇತಕೊ ನಗುತಲಿರುವಳು
ಅದೆಕೊ ಕದಪೊಳು ಕುಳಿಗಳು —
ಮನವ ಸೆಳೆಯುತ ಮೋಹದಾಳಕೆ
ತಳ್ಳಲೆಳಸುವ ಸುಳಿಗಳು !

ಇಂಥ ಚೆಲುವೆಯು ಮತ್ತೆ ಸಿಕ್ಕಳು
ಎನುತಲವಳನು ಅಪ್ಪಲು
ಮುಂದೆ ನುಗ್ಗಲು ಕನಸು ಒಡೆದುದು ;
ಕಣ್ಗೆ ಕವಿದಿತು ಕತ್ತಲು !

# ಖುಣಿಯಾರು ?

ತೆಂಗುಗರಿಗಳ ನಡುವೆ ಚಂದ್ರಮನು ನಗುತಿರಲು
ಸೊದೆಗದಿರ ಹೀರಿ ಗರಿ ತೂರಾಡುತಿರಲು,
ಇಳೆಯ ಪೆರೆಯೊಲು ಚೆನ್ನೆ ಬಳಿಯೊಳೇ ಒರಗಿರಲು,
ಪ್ರಶ್ನೆಯಿದ ಕೇಳಿದೆನು ನಗುವುಕ್ಕುತಿರಲು :

" ನೋಡಿದೋ ಒಲವರಸಿ ! ಗರಿ ಕಿರಣಗಳ ಕಣ್ಣ-
ಮುಚ್ಚಾಲೆಯಾಟವಿದು ಸೊಗಸುತಿಹುದೆಂತು !
ಈ ರಮ್ಯ ದೃಶ್ಯದಾ ರಚನೆಯೊಳು, ಚಂದ್ರಮಗೆ
ಗರಿ ಖುಣಿಯೊ, ಗರಿಗೆ ಚಂದ್ರನು ಖುಣಿಯೊ ಎಂತು ?"

ನನ್ನವಳ ಕಂಗಳನು ತುಂಟತನ ಕುಣಿಸುತಿರೆ
ಮಿಂಚಿನೊಲು ತನು ಬಳುಕೆ, ಒರೆದಳೆನಗಿಂತು :
" ಒಲವರಸ ! ಈ ಬಾಳು ಇಂತು ಸೊಗಸಲು, ನನಗೆ
ನೀ ಖುಣಿಯೊ, ನಿನಗೆ ನಾ ಖುಣಿಯೊ ಎಂತು ? "

# ಮಳೆ

“ ವಾರಿಧಿಯ ತೆರೆಗಳನು ತಬ್ಬಿ ಚುಂಬಿಸಿದ ರವಿ.
ಇರುಳು ಬರೆ ಪೆರೆಯ ದೌತ್ಯದಿ ತನ್ನ ಸಂದೇಶ-
ವರುಹಿದನು ಸಂತಸದೊಳುಬ್ಬೆ ಸಾಗರದೆದೆಯು.
ಮಾರನೆಯ ದಿನ ಸೂರ್ಯ ಪ್ರಿಯೆಗೆ ಹೊಂಗಿರಣಗಳ
ಸೀರೆಯುಡಿಸುತ ನಲಿದ. ತೆರೆಗೊಂದು ರವಿಯಾಗಿ
ನೀರ ಕೇಳಿಯನಾಡಿ ಸುಖಿಸಿ ತೂರಾಡಿದನು.
ಬಾರಿಬಾರಿಗು ತನ್ನ ಕಾದಲೆಯ ಮುತ್ತುಗಳ
ಧಾರೆಯಿಂ ಕೆಂಪಾಗಿ, ಸಂಜೆ ಬರೆ, ಅಗಲಿದನು.
ಇತ್ತ ಪೊರೆಯೇರುತಿರೆ ಪ್ರಿಯತಮನ ಸಂಗದಿಂ,
ಚಿಂತಿಸುತಲಾತನನೆ, ಆವಿಯಭಿಸಾರಿಕೆಯು
ಮುಂತ ಕಾಣದೆ ನಭದಿ, ಗಾಳಿಗೂ ಅದುರುತ್ತ,
ಸುತ್ತುತ ನಿರಾಶೆಯಿಂ, ದುಗುಡದಿಂ ಕಪ್ಪಾಗಿ
ಅತ್ತು ಕಣ್ಣೀರ ನೆರೆ ಸುರಿಸುತಿರೆ, ತೊಯ್ದಿತಿಳೆಯು”
ಎಂಬವೊಲು ವೊದಲಾಯ್ತು ತಿರೆಯೊಳೆಲ್ಲೆಡೆಯು ಮಳೆಯು!

# ಹೊನ್ನ ಶೂಲ

ಚೆಲುವಿಗಿಲ್ಲವು ಬಡವ-ಬಲ್ಲಿದ-
ರೆಂಬ ಭೇದದ ಭಾವವು !—
ನುಡಿಯಿದನು ಪರಿಕಿಸಲು ಈ ದಿನ
ಕಂಡ ಮಗುವೇ ಸಾಕ್ಷ್ಯವು !

ನಡೆದರೂ ಸಹ ತೇಲುವಂತಿಹ
ನನೆಗೆ ಮಿಂಚನು ಪೂಸುತ
ಮುಗ್ಧತೆಯೊಳದನದ್ದಿ ತೆಗೆದೊಲು
ಹಸುಳೆಯಿದೆ ನಗೆ ಸೂಸುತ !

"ಹೂವಿದಕೆ ಮತ್ತಾವ ದುಂಬಿಗ-
ಳೆರಗಿ ನಾವುಗಳಿದ್ದರು
ಚಂಚಲತೆಯೊಳೆ ಚಲಿಸಿ ಚುಂಬಿಪ
ನಮ್ಮ ಹಕ್ಕನು ಕದ್ದರು ?"—

ಎನುತ ಕುರುಳಿನ ಮಾಲೆಯಿದೊ ಹಣೆ-
ಯಿಂದ ಕಣ್ಣಿಗೆ ಇಣುಕಿದೆ !
ಕುರುಳ ಕೊನೆಯೊಂದೊಂದರಲ್ಲಿಯು
ಚೆಲುವ ದೇವಿಯ ಮಿಣುಕಿದೆ !

ಇರದು ; ಕಣ್ಣಿನ ಮಿಂಚಿಗೂ ನಗೆ-
ಮಿಂಚಿಗೂ ನಡೆಯುತ್ತಿಹ
ಸ್ಪರ್ಧೆಯಿಾಕ್ಷಿಸೆ ಹಣೆಯ ಮಣೆಯೊಳು
ಕುಳಿತು ಮೆರೆಯುತ್ತಿವೆಯಹ !

ಬಿಳಿಯ ಹಲ್ಲಿನ ಮೊಳಕೆಯೊಂದಿದೆ
ತುಟಿಯ ಕೆಂಪನು ಸಾರಲು
ಎರಡು ಕೆಂಪುಗುಲಾಬಿ ದಳಗಳ
ನಡುವೆ ಮಲ್ಲಿಗೆ ಮೊಗ್ಗೊಲು !

೩

ಬಡತನದ ಬಸಿರಲ್ಲಿ ಜನಿಸಿದ
ಹೊನ್ನ ಪುತ್ಥಳಿಯಿದು ದಿಟ!
ತಾಯಿಯಾದರೊ ಹೊನ್ನ ಶೂಲವಿ-
ದೆನ್ನುತಲಿ ಹಿಡಿವಳು ಹಟ!

ಚೆಲುವಿಗಿಲ್ಲವು ಬಡವ–ಬಲ್ಲಿದ-
ರೆಂಬ ಭೇದದ ಭಾವವು!
ಜಗದಿ ಬಗೆಬಗೆ ಹೂಗಳಿದ್ದರು
ಚಿಟ್ಟೆಗೆಲ್ಲವು ಭೋಗ್ಯವು!

# ಬಳ್ಳಿಮಿಂಚು

ಕಾರ್ಮೋಡದ ಭಾಂಡದೊಳಿಂ
ಬರೆ ಮಿಂಚಿನ ಬುಗ್ಗೆ
ತಿರೆ ಹುಬ್ಬನು ಏರಿಪೊಲಿದೆ
ಬಾನಂಚಿದು ಬಗ್ಗೆ !

ಸೌಂದರ್ಯದ ನಕ್ಷೆಯನೇ
ರಚಿಸುವವೊಲು ಮಿಂಚು
ಗೆರೆಗೆರೆಯಾಗುದ್ಭವಿಸಿದೆ
ಬೆಳಗಲು ನಭದಂಚು !

ಮೇಘಕಲಾವಿದನೇನನೊ
ಯೋಚಿಸುತಲಿ ತನ್ನ
ಕುಂಚವನಾಡಿಪನೆನ್ನುತ
ಭ್ರಮಿಸಿದೆ ಬಗೆಯೆನ್ನ !

ಮೋಡದ ಕೋಟೆಯನೇರಲು
ಕೆಚ್ಚಿದೆಯವರಾರೊ
ಯತ್ನಿಸುತಲಿ ಎಡೆಬಿಡದೊಲು
ಮಿಣಿಯೆಸೆಯುತ್ತಿಹರೊ !

ಮುಗಿಲಂಗಣದೊಳು ಮೋಡದ
ಕರಿಗಳು ತುಸ ಮುಳಿದು
ತೋರೆಯ ದಂತಗಳುಜ್ವಲು
ಮಿಂಚುದಿಸಿತೊ ಹೊಳೆದು !

" ಬೊಮ್ಮನದೆಂತಾಂ ಸೃಜಿಸಿದ
ಕುಡಿಮಿಂಚನು ಕದ್ದು
ಹೆಣ್ಗಳಿಗೀವನು ? " ಎನುವಂ-
ತಿದೆ ಗುಡುಗಿನ ಸದ್ದು !

ಮೋಡದ ಕರಿಹಸುವಿದು ಬಿಳಿ
ಮಿಂಚಿನ ಹಾಲ್ ಕರೆದು
ಮೆರೆದಿದೆ " ಚೇತನ ಜಡದೊಳೆ
ಸುಪ್ತವು " ಎಂದೊರೆದು !

ಕಾರ್ಮೋಡದ ಭಾಂಡದೊಳಿಂ
ಬರೆ ಮಿಂಚಿನ ಬುಗ್ಗೆ
ತಿರೆ ಹುಬ್ಬನು ಏರಿಪೊಲಿದೆ
ಬಾನಂಚಿದು ಬಗ್ಗೆ !

# ಹೊಗೆಯ ಸೊಪ್ಪು

ಹೊಗೆಯಸೊಪ್ಪಿನ ಮೇಲೆ ಪದ್ಯವ
ಬರೆವ ನನ್ನನು ಹಳಿಯದೆ
ಸಾವಧಾನದೊಳದರ ಮಹಿಮೆಯ
ಕೇಳಿರಯ್ಯಾ ಮುಳಿಯದೆ !

ಜಗದೊಳೆಷ್ಟೋ ಸೊಪ್ಪುಸದೆಗಳು
ಬೆಳೆದು ಮಡಿಯುತಲಿವೆ ನಿಜ
ಪೇಳಿರೈ ನಿಮಗಾವುದೀವುದು
ಹೊಗೆಯಸೊಪ್ಪಿನ ಈ ಮಜ!

ಹಳಿವರೆಲ್ಲರ ತೃಪ್ತಿಗೋಸುಗ
ಇದರ ಜನನವನಿಲ್ಲಿಯೆ
ಬಣ್ಣಿಪೆನು ನಾ. ಇದುವು ಜನಿಸಿತು
ಶಿವನ ಸಮ್ಮುಖದಲ್ಲಿಯೆ !

ಒಮ್ಮೆ ಶಿವನಿಗೆ ಗಂಗೆ ತಲೆಯೊಳು
ನೆಲಸಿ ನೆಗಡಿಯು ಹಿಡಿದಿತು
ನಾರದನ ಜೊತೆಯಲ್ಲಿ ಯೋಚಿಸೆ
ಹೊಗೆಯಸೊಪ್ಪಿದು ಜನಿಸಿತು !

ಇದರ ಫಲವನು ಕಂಡ ಶಂಕರ
" ತಿರೆಯೊಳೂ ಇದ ಸೃಷ್ಟಿಸಿ
ಜನರಿಗುಪಕಾರವನು ಗೈವೆನು "
ಎಂದ ಗೌರಿಯ ದೃಷ್ಟಿಸಿ !

ಅಂದಿನಿಂ ಮೊದಲಾಯಿತಹಹಾ
ಹೊಗೆಯ ಸೊಪ್ಪಿನ ಮೋಹವು !
' ಮೋಹ ' ವೆಂದೆನೆ ? ತಪ್ಪು ನುಡಿದೆನು.
ಮೋಹವಲ್ಲವು, ನೇಹವು !

ಕೆಲರು ಸೊಪ್ಪನು ಎಲೆಯ ಜೊತೆಯೊಳು
ಜಗಿದು ಸುಖಿಸುತ ನಲಿದರು !
ಮತ್ತೆ ಕೆಲವರು ಪುಡಿಯ ಮೂಗಿಗೆ
ತುರುಕಿ ಮೂಗೊಳೆ ಉಲಿದರು !

ಇನ್ನು ಕೆಲವರು ಸುರುಳಿಗೈಯ್ಯುತ
ಅದಕೆ ಬೆಂಕಿಯನಿಟ್ಟರು !
ಬಂದ ಹೊಗೆಯನು ಶ್ವಾಸಕೋಶಕೆ
ಕಳುಹಿ ಉಸುರನು ಬಿಟ್ಟರು !

ಇಂತು ವಿಧವಿಧ ರೀತಿಯೊಳು ಜನ
ಹೊಗೆಯಸೊಪ್ಪನು ಬಳಸುತ
ನಲಿಯುತಿರಲದ ಮಾರಿ ಬಹುಜನ-
ರಿದ್ದರಲ ಹಣ ಗಳಿಸುತ !

ಒಳ್ಳೆ ಸುಣ್ಣದ ತೆಳ್ಳನೆಯ ಲೇ-
ಪವನು ಧರಿಸಿಹ ಚಿಗುರೆಲೆ
ಘಮ್ಮನಡಕೆಯು, ಜೊತೆಗೆ ಸೊಪ್ಪಿರೆ
ತಿರೆಯ ಜೀವನ ಹಗುರೆಲೆ !

ಅಡಕೆಲೆಯ ಜಗಿದಿಂತು ಬಿಡದಲೆ,
ಕೆಂಪಗಾಗಿರೆ ತುಟಿಗಳು
ಬೆರಳ ಮಧ್ಯದಿ ರಸವ ಪಿಚ್ಚನೆ
ಉಗುಳ್ವರಹಹಾ ಸುಟಿಗಳು !

ಬೆರಳುಗಳ ನಡುವಿಂದ ಬುಗ್ಗೆಯ
ತೆರದಿ ಝುಗ್ಗನೆ ನುಗ್ಗುತ
ಬಗೆಬಗೆಯ ತುಂತುರನು ರಚಿಪುದು
ಅರುಣ ರಸ ನೆರೆ ಹಿಗ್ಗುತ !

ಇಂತು ಜಗಿದರೆ ಹಲ್ಲಹುಳುಕಿಗೆ
ಪರಮ ಔಷಧವೆಂಬರೈ!
ಮದ್ದಿದೀಯದೆ ಹಲ್ಲಕೀಳುವ
ವೈದ್ಯರೆಲ್ಲರು ಹುಂಬರೈ!

ಬೇಸ್ತಿನಾಟದಿ, ಸುತ್ತುಮುತ್ತಿನ
ಗೆಳೆಯರೆಲ್ಲರು ಬಳಿಯಿರೆ
ಕಾಯುತೆನ್ನಿಳಿತವನೆ ಭಯದೊಳು
ಸದ್ದ ಮಾಡದೆ ಕುಳಿತಿರೆ,

“ ನೈಲ ತೂರಲೊ ತೂರದಿರಲೋ ”
ಎಂಬ ಪೇಚೊಳು ನಾನಿರೆ
ಒಂದೆ ಚಿಟಿಕೆಯ ಮೂಗಿಗೇರಿಸೆ
ಹರಿವುದಹ ಮಂಕಿನ ಪೊರೆ!

ಠೀವಿಯೊಳು ಬಲಗಾಲ ತುದಿ ಎಡ-
ಗಾಲ ಮಂಡಿಯೊಳಾಡುತ
ತೂಗುತಿರೆ, ಘೃತ ಸುಣ್ಣ ಬೆರೆಸಿದ
ಮಡ್ಡಿನಶ್ಯವ ತೀಡುತ,

ಕುಳಿತು—ಸಗ್ಗದ ಮರಿಗಳಂದದ
ಗುಳಿಗೆ ಕೈಯೊಳು ನಿಂದಿರೆ
ಅದನೆ ನೋಡುತ ಪಡುವ ಸುಖವಿರೆ
ಏಕೆ ನನಗಾ ಇಂದಿರೆ ?

ನೇವಿಕಟ್ಟನೊ ಗೋಲ್ಡುಫ್ಲ್ಯಾಕನೊ
ಬಾಯಲಿಡುತಲಿ ಬೆಂಕಿಯ
ಹಚ್ಚಿ ನೋಡಿರಿ ! ನನ್ನ ಮಾತೊಳು
ನೀವು ಕಳೆವಿರಿ ಶಂಕೆಯ !

ತನಗೆ ತಾನೇ ಬಾಯಿ ಗೊಣಗುತ-
ಲಿರಲು ಹಾಡಿನ ಗುಂಗನು
ಕಣ್ಣು ತೇಲಿಸಿ, ದಮ್ಮನೊಂದನು
ಎಳೆದು ಬಿಡುತಲಿ ರಿಂಗನು,

ಅದನೆ ದಿಟ್ಟಿಸಿ ಮನದ ಪಾತ್ರೆಗೆ
ಸ್ವಪ್ನಮಧುವನು ತುಂಬಿಸಿ !
ನಲಿಯದೀ ಜನ ಬರಿದೆ ಬೈವರು
ಮೂರ್ಖತನವನು ಬಿಂಬಿಸಿ !

ಉಗಿಯ ಬಂಡಿಗೆ ಆವಿಯೆಂತೋ
ಮತ್ತದೆಂತೋ ಸುರೆಯೊಳು
ನಿದ್ದೆಗೊಳ್ಳೆಯ ಕನಸದೆಂತೋ
ಅಂತೆ ಸಿಗರೇಟ್ ತಿರೆಯೊಳು !

“ ಹೊಗೆಯ ಸೊಪ್ಪಿದು ಕೆಡುಕನೀವುದು ”
ಎನುವರೆಲ್ಲರು ಪೆದ್ದರು
ತಿರೆಯೊಳುತ್ತಮ ಸೃಷ್ಟಿಯೆನಿಸಿದ
ನರನ ಕುಟಿಲತೆ ಮರೆವರು !

ನಿದ್ದೆವೆಣ್ಣಿನ ಕನಸ ಸೀರೆಯು
ಅವಳ ನೆರವೊಂದಿಲ್ಲದೆ
ಕಾಣಬಹುದಹ ಹೊಗೆಯಸೊಪ್ಪೊಳು
ಏನು ಮಾಯೆಯಿದಲ್ಲದೆ !

ಅದರಿನೆಲ್ಲರು ನನ್ನ ಮಾತೊಳು
ನಂಬಿ ಸೊಗವನು ಕಾಣಿರಿ
ಪ್ರಾಣಿಗಳು ಸಹ ನಾಚಿಕೊಳುವಂ-
ತಿರುವ ಬೈಗಳ ಮಾಣಿರಿ.

# ಕಡಲಿನ ತಡಿಯಲ್ಲಿ

ಪ್ರಕೃತಿಯಿಾ ಮಡಿಲಿನಲಿ ಕಡಲಿನೀ ತಡಿಯಲ್ಲಿ
ಎಲ್ಲ ಇದೆ! ಮನಕಿಂದು ಶಾಂತಿಯೊಂದಿಲ್ಲ || ಪಲ್ಲವಿ ||

ತುಂಬು ಚಂದಿರನು ಬಹನೆನುತ ಸಾರಿಸಿದಂತೆ
ಗಗನದಂಗಣವಿಂದು ಅತಿಶುಭ್ರ ನೀಲ!
ಮುಗಿಲುಕಡಲುಗಳೊಳಗೆ ಬಿಂಬ ಪ್ರತಿಬಿಂಬಗಳು
ಆವುದೋ! ಒಡೆಯಲಿಕಭೇದ್ಯವೀ ಜಾಲ!

ಕಾದು ನಸು ಬೆಚ್ಚಗಿಹ ಬಿಳಿಮರಳ ಹಾಸುಗೆಯು!
ತೆರೆಗಳಿದೆ ಮೇಲೆ ನಡೆದೈತರುವ ಪವನ!
ಮೌನಕೇ ಕಚಕುಳಿಯನಿಡುತಿರುವ ಕಡಲ ಮೊರೆ!—
ಅಕಟಕಟ! ವ್ಯರ್ಥವೈ ಪ್ರಕೃತಿಯಿಾ ಕವನ!

ಜಡತನದ ಮುದ್ದೆಯಂತಿನಿತು ದಿನ ರೆಕ್ಕೆಗಳ
ಮುದುಡಿ ಕುಳಿತಿದ್ದಕಿದ್ದೊಲೆ ಚಿಮ್ಮಿ ನೆಗೆದು
ಭೂತದೊಳು ಹಾರಾಡಿ, ಭವಿತವ್ಯದೊಳಗಿಣುಕಿ
ಬಹ ಮನದ ಖಗ ಕುಣಿವುದಿಂದೇನ ಬಗೆದು?

ನಲ್ಮೆಯನೆ ಹಾರೈಸೆ ಮನವೆನಿತು ಬಳಲಿದರು
ನೈರಾಶ್ಯವೇ ಉಕ್ಕಿಬರುತಿಹುದಿದೇನು?—
ಮಧುವಿಗಾಶಿಸಿ ಗೂಡ ಕೆಣಕಲೇಳುತ ನುಗ್ಗಿ
ಮೊಗಕೆರಗಿ ಮುಳ್ಳುಗಳ ನೆಡುವವೊಲು ಜೇನು!

ಫಲಿಸದೊಲವಳಿದ ಕೆಳೆ, ಸೆಳೆದ ತನು, ತಳೆದ ಕೊರೆ—
ಮನದ ಕಳವಳದ ಕತವೇನು ಒಂದೆರಡೆ?
"ಸಾಲದಿದು" ಎಂಬೊಲು ನಿರಾಶೆಯಿಾ ನಿಟ್ಟುಸಿರು:
ಮುಂದೆ ಕಾದಿರುವುದೂ ರಸವಿರದ ಬರಡೆ!

೩೧

ಕಂಗೊಳಿಪ ಚೆಲುವಿಹುದು, ತಂಗಾಳಿ ಬೀಸಿಹುದು
ರಂಗೇರುತಿರೆ ದಿಗಂಗನೆಯ ಕದಪೆಲ್ಲ
ತಿಂಗಳೈತಂದು ಮುಗಿಲಂಗಣಕೆ, ಸೊದೆ ಜಗದಿ
ತಂಗಿದರು ಮನಕಿಂದು ಶಾಂತಿಯೊಂದಿಲ್ಲ!

# ದಾರಿಯಲ್ಲಿ

ಬಳಿಯ ಗೃಹದಿ ದಿವ್ಯಗಾನ
ಸೂಸಿ, ಮಿಡಿದು ನಾಡಿಯ—
ಗೈದಿತೆಂಥ ಮೋಡಿಯ !  || ಪಲ್ಲವಿ||

ವಾದದ ಬಿರುಗಾಳಿಗೆ ಮನ ಸಿಲುಕಿ ಪಟದೊಲಾಗಿರೆ
"ಯಾವುದು ಸರಿ" ಎಂಬ ತೊಡಕಿನೊಳಗೆ ಮನವು ಸಿಲುಕಿರೆ
ಕದಡಿದ ಜಲ ತಿಳಿಯುವವೊಲು ಕತಕ ಬೀಜ ಬೀಳಲು
ಮನದ ವಿವಿಧ ಗೊಂದಲಿಂದ ಸೊನ್ನೆಯೊಂದು ಏಳಲು

ಏಕೊ ಏನೊ ಕತವದೇನೊ ಪದ ಚಲಿಸದೆ ನಿಂದಿತು
ಚರ್ಚೆಯ ತಿಕ್ಕಾಟದುರಿಯದೇಕೊ ಕಾಣೆ ನಂದಿತು
ಕಾದ ನೆಲಕೆ ಮಳೆಯು ತೆರದಿ, ಮನಕೆ ತಂಪ ತಂದಿತು
ಮುಂದಕೆ ಚಲಿಸಿದರು ಬಿಡದೆ ಹಿಂಬಾಲಿಸಿ ಬಂದಿತು !

ಏನು ಧಾಟಿಯೇನು ಬಳುಕಿದೇನುರಾಗ ಪಲುಕಿದು !
ದಿಟವು, ನೋಡೆ, ಆ ಬೆಡಗಿ ದನಿಯ ಹೆಣ್ಣ ಥಳಕಿದು !
ತೆರೆತೆರೆಯಾಗ್ಯೆತರುತಲಿ ಕಿವಿಗೆ ಸೊದೆಯನೆರೆಯುತ
ವಿಧ ವಿಧ ವಿಧ ಭಾವಗಳನು ಬೆಳೆಸುತಿಹಳು ಮೊರೆಯುತ !

ಮರದಿ ಕುಳಿತ ಗಾಳಿ ತಲೆಯ ತೂಗಿದೊಲೆಲೆಯಲುಗಿದೆ !
ಕೆಳಗೆ ನೆಳಲ ಬೆಳಕ ರಾಸನೃತ್ಯ ಬಿಡದೆ ಸಾಗಿದೆ
ಗೀತದ ಮತ್ತೇರಿ ದಾರಿ ಮೈಯ್ಯ ಚಾಚಿ ಬಿದ್ದಿದೆ !
ಕಾಲ ಮಾತ್ರ ಉಸಿರುಕಟ್ಟುತೊಂದೆ ಸಮನೆ ಓಡಿದೆ !

ದೂರ ದೂರ ತಿಳಿಯದೂರಿನೀ ಅಬಲೆಯ ಕೊರಳಿನ
ದನಿಬಾನೊಳು ಚರಿಸುತಿರಲು, ಸಿಲುಕಿ ಯಂತ್ರದುರುಳಿನ
ಒಳಗೆ, ಹಾದು ಬೀಸಿತಹಹ ಎಂಥ ಮಾಯಾಜಾಲವ !—
ಮನೆಯೊಳಿನ್ನು ಬೈಗುಳಿಷ್ಟೊ ಮೀರಿದುದಕೆ ಕಾಲವ !

# ಸೋಮಾರಿ

ಬರಿದೇ ಬೈವರು ಜನ ಸೋಮಾರಿಯ!
ಕೋಣಕೆ ಸಮನೆನುತಲಿ ಛೀಮಾರಿಯ
ಮಳೆ ಸುರಿಸುತ ಮುದಗೊಳ್ಳುತಲಕಟ
ತೊಡಿಪರು ಬೈಗುಳ ಮುಳ್ಳಿನ ಮುಕುಟ!
"ಕೆಲಸಕೆ ಕುಳಿತರೆ ಒಂದೇ ಎರಡೇ?
ಅದನು ನೆಚ್ಚಿದರೆ ಜೀವನ ಬರಡೇ!"
ಎಂಬ ಸತ್ಯವನು ಅರಗಿಸಿಕೊಂಡಿಹ
ಸೋಮಾರಿಯೆ ಜಗದೊಬ್ಬನೆ ಗಂಡಹ!
ಕಾಲಚಕ್ರಕಡಿಯಾಳಾಗಿಹ ರವಿ
ಬೆಟ್ಟವನೆಬ್ಬಿಸುತಿರೆ ಮೈದಡವಿ
ಅದಕೂ ಮುನ್ನವೆ ಎಚ್ಚತ್ತಿರೆ ಬುವಿ
ಬೆಚ್ಚನೆ ಕಂಬಳಿ ಮುಸುಕೊಳದೇಂ ಸವಿ!
ದೂರದ ರೇಡಿಯೊ ಗಾನವ ಕಿವಿಯು
ಚಪ್ಪರಿಸುತಿರೆ ಇನ್ನೂ ಸವಿಯು!
ಇಂತು ಮುಳುಗಿರಲು ಅರೆನಿದ್ದೆಯೊಳು
ಎಚ್ಚರಕೂ ಹೊಳೆಯದ ಭಾವಗಳು
ಸುಳಿಯುವುವಹ ಮನವನು ನಸು ಕೆಣಕಿ
ಹುಡುಗಾಟಕೆ ಮಗು ನೋಡುವೊಲಿಣುಕಿ:
"ಎಲ್ಲ ಸುಖಗಳಿಗೆ ಮಿತಿಯೊಂದುಂಟು!"
ಎನೆ ಗಡಿಯಾರವು ಬಾರಿಸಲೆಂಟು
"ಆರಿತು ಕಾಫಿಯು ಏಳಿರಿ ಸಾಕು!"
ಎನ್ನುತಲಿರೆ ಮನೆಯಾಕೆಯ ಕಾಕು,
ಮತ್ತೀ ಜಗಕೇ ಬರುವೊಲು ಮೆದುಳು
"ಏಳಪ್ಪಾ" ಎನೆ ಮಗುವಿನ ತೊದಲು
ಎಳೆಯನ ಚುರುಕಭಿಮಾನವ ಕೊರೆಯೆ
ಕಂಬಳಿ ಮುಸುಕನು ಕೊಂಚವೆ ತೆರೆಯೆ
ಕಿಟಕಿಯು ಚೆಲ್ಲಿಹ ನೆರಳನು ಕಂಡು,

ಎದ್ದು, ಮೈಮುರಿದು ಆ ಸುಖವುಂಡು
ಕಾಲ ಹೊರಗಿಡಲದೆಂತಹ ನೋಟ!
ಕಣ್ಣಳಿಗೆಂತಹ ಹಬ್ಬದ ಊಟ!—
ಎಲ್ಲೆಲ್ಲೂ ತೂಕಡಿಸುವ ಮಂಜು!
ಬಣ್ಣ ಬಣ್ಣಗಳ ಹೂಗಳ ಪಂಜು!
ಕಾಣದ ವಿಧವಿಧ ಖಗಗಳ ಗಾನ!—
ಸಗ್ಗಕೆ ಒಯ್ಯುವ ದನಿಗಳ ಮೇನ!
ಇರುಳೆಲ್ಲಾ ಬಿಳಿ ಮಂಜನು ಹೀರಿ
ತಲೆದೂಗುತ್ತಿದೆ ಕುಡಿ ಮತ್ತೇರಿ!
ಹುಲ್ಲು ಧರಿಸಿಹವು ಬೆಳ್ಳಿ ಮುಲಾಮು
ಕಣ್ಣಿಟ್ಟವರಿಗೆ ಹಾಕಿ ಸಲಾಮು!
ನಿದ್ದೆಯ ಕಂಗಳು ರವಿಕರ ಸ್ಪರ್ಶದಿ
ಮುದಗೊಳ್ಳುತ ತೇಲುವುವಹ ಹರ್ಷದಿ!
"ಎಂಟಕೆ ಏಳ್ವುದೆ ದೊಡ್ಡ ಪುರಾಣ!
ಮುಖ ತೊಳೆವುದರೊಳು ಹೋಹುದು ಪ್ರಾಣ!"
ಎನ್ನುವ ಗೃಹಿಣಿಯ ಸಿಡಿನುಡಿ ಕಿವಿಗೆ
ಸೊದೆಯೆರೆಯುತ್ತಿರೆ ಇಳಿದೀ ಬುವಿಗೆ
ಪ್ರಕೃತಿಯ ಪಾಡಿಗೆ ಪ್ರಕೃತಿಯ ಬಿಡಲು
ಬಚ್ಚಲ ಮನೆಯೊಳು ಕಾಲ್ಗಳನಿಡಲು
ಒಲೆಯ ಪ್ರಲೋಭನ ಜಾಲಕೆ ಸಿಲುಕಿ
ಮುಂಗಡೆ ಕೂರುತ ಹೆಂಡತಿಗಳುಕಿ
ಬೆಂಕಿಯ ಜೊತೆಯೊಳು ಆಡುತಲಿರಲು
ಅಲ್ಲಿಗು ಹೆಂಡತಿ ಬಂದೆರಗಿರಲು
"ಬೆಂಕಿಯ ಶಾಖವೆ ಎಷ್ಟೋ ಮೇಲು!
ಅದಕೂ ಬಿಸಿ ಕಿಡಿನುಡಿಗಳ ಸಾಲು!"
ಎನ್ನುತಲವಳನು ರೇಗಿಸಿ, ನಗಿಸಿ
ಮುಖಮಾರ್ಜನಗಳ ಶಾಸ್ತ್ರವ ಮುಗಿಸಿ

ಬಂದು ಬಿಸಿ ಕಾಫಿ ಹೀರುತಲಿರಲು
ಚೆಲುವಿನ ಮನೆಯಾಕೆಯ ಸವಿಗೊರಲು
"ಎಣ್ಣೆಯ ಸ್ನಾನಕೆ ಏಳಿರಿ" ಎನಲು
ಬೇಡೆನ್ನುತ್ತಿರೆ, ತೈಲವ ತರಲು
ತಲೆಗೊತ್ತುತಲಿರೆ ಆ ಸುಖ ಸವಿದ
ಬಳಿಕ ನುಗ್ಗುತಲಿ ಕತ್ತಲೆ ಕವಿದ
ಸ್ನಾನದ ಕೋಣೆಗೆ, ಎಣ್ಣೆಯ ತರಿಸಿ
ಲೇಪಿಸಿ ಮೈಯ್ಯಿಗೆ, ಉಗುರೊಳು ತುರಿಸಿ
ವಿಧ ವಿಧ ಚಿತ್ತಾರಗಳನು ಬರೆಯುತ
ಕೋಣೆಯ ಹೊರಗಣ ಜಗವನೆ ಮರೆಯುತ
ಕನಸನು ಕಾಣುತಲಂತೇ ನಿಂದಿರೆ
ಬೆನ್ನಿಗೆ ಎಣ್ಣೆಯ ಲೇಪಿಸಲಿಂದಿರೆ
ಇದಕೂ ಮಿಕ್ಕಿಹ ಸುಖವಿನ್ನುಂಟೆ ?
ಸುಮ್ಮನೇತಕೋ ಕೆಲಸದ ತಂಟೆ ?
ಬಿಸಿ ಬಿಸಿ ನೀರಿನ ಮಣಿಗಳ ಕೈಯೊಳು
ಹಿಡಿಯುತಲವುಗಳ ಧರಿಸಿ ಮೈಯೊಳು
ಬಿಸಿಲಿನ ಕೋಲಿಗೆ ಮೈಯನು ಒಡ್ಡಿ
ನೀರಿನ ಮಣಿಗಳ ಮಿಸುನಿಯೊಳದ್ದಿ
ಅವುಗಳ ಗೃಹಿಣಿಗೆ ತೋರಿಸಿ ನಲಿಯುತ,
"ಹುಡುಗಾಟವಿದೇನೇಳಿರಿ" ಎನ್ನುತ
ಸಿಡುಕಲು, ಆಕೆಯ ಕೆನ್ನೆಗೆ ಚಿಮುಕಿಸೆ
ನೀರನು, ನಗುತಲಿ ಕಣ್ಣನು ಮಿಟುಕಿಸೆ,
"ಅಯ್ಯೋ! ಮುಖಕ್ಕೆ ಹಾರಿತು ಎಣ್ಣೆ!"
ಎನ್ನುತ ಕೋಪದೊಳೊರೆಯಲು ಚೆನ್ನೆ,
ಅಂತೂ ಇಂತೂ ಸ್ನಾನವ, ಆಡುತ
ಮುಗಿಸುತ, ಕಂಬಳಿ ಮುಸುಕೊಳಗಡಗುತ
ಬಿಸಿ ಬಿಸಿ ಕಾಫಿಯು ಬರಲಿನ್ನೊಮ್ಮೆ

ಕುಡಿದಾಕೆಯ ಸೆಳೆಯುತ ತುಟಿಗೊಮ್ಮೆ
ಬಿಸಿಯ ಮುತ್ತನೊತ್ತುತ್ತಿರೆ ಸುಖದಿ
ಸೋಮಾರಿಯೆ ಸರಿ ಓಡುವ ಜಗದಿ !

ದಿಟವೈ ಈ ಜಗ ನಿಲದೋಡುತಿದೆ
ಗಳಿಗೆ ಗಳಿಗೆಗೂ ಮುಂದಕೋಡುತಿದೆ
ಏಕಿದಾತುರವೊ ಅರಿಯೆನು ನಾನು !
ತಲೆ ಹೋಹಂತಹ ಕೆಲಸವದೇನು !
ಧೂಳನೆಬ್ಬಿಸುತ ಓಡುವ ಕಾರು
ತೆರಳಲು ಗಂಟೆಗೆ ಮೈಲಿನ್ನೂರು
ಏನುಪಯೋಗವೊ ? ಅದರಲಿ ಕುಳಿತ
ಪೆದ್ದಗೆ ಬರುವುದೆ ಬುದ್ಧಿಯು ಬಲಿತ ?

ಎದ್ದರು ನೇಸರಿಗಿಂತಲು ಮುನ್ನವೆ
ಸೂರ್ಯೋದಯವನೆ ಸವಿಯದ ಬನ್ನವೆ !
ಎದ್ದು ಗಡಿಬಿಡಿಯೊಳೋಡಾಡುತ್ತ
ಮಲಗಿರುವವರನು ಬೈದಾಡುತ್ತ
"ಶುದ್ಧ ಸೋಮಾರಿ ! ಏಳದೆ ಉಂಟೆ ?"
ಎನ್ನುತ ಬರಿದೇ ಗೈಯುತ ತಂಟೆ,
ಒಲೆ ಹತ್ತದೆಯೇ ಇದ್ದರು ಕೂಡ
"ಕಾಫಿ ಆರಿತು" ಎನ್ನುತ ದಡಬಡ
ಸದ್ದನು ಮಾಡಿ, ಪಾತ್ರೆಯ ಕೆಡವಿ
ಮೊಲೆಗೂಸನು ಸಹ ಎಬ್ಬಿಸಿ ತಡವಿ
ಇಷ್ಟಾದರು ಮಲಗಿಹರನು ದೂಷಿಸಿ
ಕಿವಿ ಕಣ್ಣುಗಳಿಗೆ ನೀರನು ಚಿಮುಕಿಸಿ
"ತಣ್ಣೀರಿದ್ದರೆ ತಣ್ಣೀರೇ ಸರಿ !
ಬಿಸಿನೀರಿದ್ದರೆ ಹೂಂ ಅದಕೂ ಸರಿ !"
ಎನ್ನುತ ನೀರನು ಮೈಯ್ಯಿಗೆ ಎರಚಿ

ಚುಟುಕೊಳು ಸ್ನಾನವ ಮುಗಿಸುತ, ಅರಚಿ
ಏನೇನೋ ಮಂತ್ರಗಳನು ಬಾಯೊಳು,
ಗಟಗಟ ಕಾಫಿಯ ಸುರಿದು ಗಂಟಲೊಳು
ಮನೆಯಾಕೆಯ ಕಡೆ ತಿರುಗುತ ಮಂದ-
ಹಾಸವೊಂದನೂ ಬೀರದೊಲವಿಂದ
ಓಡುವರೆಲ್ಲಿಗೊ ಅವಸರದಿಂದ
ಸವಿಯದೆ ಸುತ್ತಣ ಪ್ರಕೃತಿಯ ಚೆಂದ!
ಈ ಅವಸರವೇತಕೊ ನಾ ಕಾಣೆ!
ಇದರಿಂದೇನುದ್ಧಾರವೊ ಕಾಣೆ!

"ಆತುರಗಾರಗೆ ಬುದ್ಧಿಯೆ ಮಟ್ಟು!"
ಆವ ಕೈ ಹಾಕಿದ ಕಾರ್ಯವೆ ಛಟ್ಟು!
ಆತುರ ಮರವುಗಳೆರಡಕು ನಂಟು!
ಅದರಿಂ ತಾಪತ್ರಯ ನೂರೆಂಟು!—
ಏನನೊ ಬರೆಯುತ ಕುಳಿತಿರೆ, ಚೆನ್ನೆ
ಕಾಫಿಯ ಮುಂದಿಡೆ, ಲೋಟವದನ್ನೆ
ಮಸಿಯ ಕುಡಿಕೆಯಿದು ಎನ್ನುತ ಭ್ರಮಿಸಿ
ಅದರೊಳೆ ಲೇಖನಿಯದ್ದುತ ಕಸಿವಿಸಿ
ಪಡುವುದೇತಕೋ! ಬಳಿಕ ಗೃಹಿಣಿಯನು
ಬೈವುದೇತಕೋ! ಕಣ್ಣಿನ ಮಣಿಯನು
ನೋಯಿಸಿ, ಸಂಸಾರದ ಸೊದೆಗಡಲೊಳು
ಹುಳಿಯ ಹಿಂಡುವುದಕಿಂತಲು, ಜಗದೊಳು
ಜಡತನದಿಂದಿರುವುದೆ ಮೇಲಲ್ಲವೆ?
ಇಲ್ಲದೊಡೀ ಬಾಳ್ ವ್ಯರ್ಥವಲ್ಲವೆ?

ಚೆಲುವ ಸವಿಯಲೂ ಇವರಿಗಾತುರವು!
ಇಲ್ಲವೆ ಇಲ್ಲವು ನಿಲ್ವ ಕಾತರವು!—
ಪೆಪ್ಪರಮೆಂಟನು ಕೊಟ್ಟರೆ ತೆಗೆದು

ಚಪ್ಪರಿಸದೆ ಅದ ಕಚಕಚನಗಿದು
ನುಂಗುವರೀ ಜನಕೇನು ಹೇಳಲಿ !
ಜಗವನೆ ಹೊತ್ತಿಹರೇನೊ ತೋಳಲಿ
ಎನ್ನುವ ತೆರದೊಳು ಓಡಾಡುವರು !
ಸೋಮಾರಿಯ ತನ್ನಷ್ಟಕೆ ಬಿಡರು !

ಪಾದರಸವು, ದಿಟ, ಚುರುಕ ತವರೂರು !
ಏನುಪಯೋಗವೊ ? ಬಿದ್ದರೆ ಚೂರು !
ಬೆಣ್ಣೆಯು ಜಗದೊಳು ಮೊದ್ದಿನ ಮುದ್ದೆ !
ನೆಲಕ್ಕೆ ಬಿದ್ದರು ಒಡೆವುದೆ ಪೆದ್ದೆ ?

ಇನ್ನೇತಕೆ ಬರಿ ಚರ್ಚೆಯು ಸಾಕು !
ಓಡುವಿಳೆಗೆ ಸೋಮಾರಿಯೆ ಬ್ರೇಕು !

# ಆಸ್ತಿಕನಿಗೆ

ಎಲ್ಲಿಹನೋ ನಿನ್ನ ದೇವ ?
ಅದೆಲ್ಲಿಹನೋ ನಿನ್ನ ಕಾವ ?
ತಂದೆದುರಿಗೆ ನಿಲ್ಲಿಸೊ !
ಅದುವರೆವಿಗು ಏನೇನನೊ
ಗಳಹುವುದನು ನಿಲ್ಲಿಸೊ !

ಅನಂತನೆಂಬೆ !
ಅಂತವುಳ್ಳ ನೀನವನನು ಕಾಣೆ ಸತತ ಯತ್ನಿಪೆ !
ಅಚಿಂತ್ಯನೆಂಬೆ !
ಅನವರತವು ನಿನ್ನ ಮನದೊಳವನ ಬಿಡದೆ ಚಿಂತಿಪೆ !
ಅಮೇಯನೆಂಬೆ !
ಮೇಯವಾದ ಅವನ ಗುಣಗಳನ್ನು ಸತತ ಹೊಗಳುವೆ !
ಅಜೇಯನೆಂಬೆ !
ಭಕ್ತವಿಜಯಗಳನು ನೆನೆದು ಆದರ ಮುದದಿ ಮುಳುಗುವೆ!

"ಸಂಭವಾಮಿ ಯುಗೇ ಯುಗೇ"
ಎಂಬ ಮಾತನೊರೆಯುವೆ !—
ಅಧರ್ಮ ಜಗದಿ ಹೆಚ್ಚಿದಂದು
ಧರ್ಮದುದ್ಧಾರಕೆಂದು
ಅವತರಿಪನು ದೇವನೆಂದು
ಗೀತೆಯುದ್ಧರಿಸುವೆ !
ಅಂತಾದೊಡೆ ಇಂದಿಗಿಂತ
ಕೆಟ್ಟ ಜಗವು ದೊರೆವುದೆ ?
ಇಂಥ ಸಮಯ ಬರುವುದೆ ?
ಅಧರ್ಮ ಕಾಡ ಕಿಚ್ಚ ಹೋಲಿ
ಹಬ್ಬಿ, ನಲ್ಮೆಯೆಲ್ಲ ಕೇಲಿ
ಮಾಯವಾಗೆ ಯಾವ ಕೇಲಿ-

ಯೊಳಗೆ ದೇವ ಮಗ್ನನೊ!
ಮಾತನಿತ್ತು ಬರದ ದೇವ-
ನೆಂಥ ವಚನ ಭ್ರಷ್ಟನೊ!

ಪಾಪ! ಸೊದೆಯು ಕಡಲ ಸವಿಯ
ಮತ್ತಿನೊಳಗೆ ಈ ಬುವಿಯ
ಗೋಳು ಸೇರದೇನೊ ಕಿವಿಯ!

"ಬುವಿ ಪ್ರಯೋಗಶಾಲೆಯು!
ಇದೆಲ್ಲ ಅವನ ಲೀಲೆಯು!"
ಎಂದು ನುಡಿಯುವೆ!
"ಎಲ್ಲ ಅವನ ಲೀಲೆಯು!"
ಲೀಲೆಯಂತೆ ಲೀಲೆಯು!

ಯುದ್ಧಮಾರಿ ಹರಡುತಿರುವ
ಕಿಚ್ಚು ಇಳೆಯ ದಹಿಸಲಿ!
ಚಕ್ರಾಧಿಪತ್ಯವೆನಿತೊ
ನುಚ್ಚು ನೂರಾಗಲಿ!
"ಎಲ್ಲ ಅವನ ಲೀಲೆಯು!"

ಕ್ಷಾಮಾಗ್ನಿಯು ನಾಲಗೆಯನು
ಚಾಚಿ ಜಗವ ನೆಕ್ಕಲಿ!
ಬುವಿಯು ಬಸಿರ ಬಗೆದು 'ಲಾವ'
ಎಲ್ಲೆಲ್ಲಿಯು ಉಕ್ಕಲಿ!
"ಎಲ್ಲ ಅವನ ಲೀಲೆಯು!"

ಕಾದ ಗುಳದ ತೆರದಿ ಭಾನು
ಕೂಲಿಗಳನು ಚುಚ್ಚಲಿ!

ಕರಾಳ ಮೇಘ ಮಿಂಚು ಸಿಡಿಲ
ಪೊಟ್ಟಣವನು ಬಿಚ್ಚಲಿ!
''ಎಲ್ಲ ಅವನ ಲೀಲೆಯು!''

ಅನೀತಿ ಜಗದಿ ನೆಲಸಲಿ
ಅಧರ್ಮ ಬಂದು ಕುಣಿಯಲಿ
ಅಶಾಂತಿಯೆಲ್ಲು ಹಬ್ಬಲಿ
ಅಕೃತ್ಯ ಬಿಡದೆ ನಡೆಯಲಿ
ನರನು ನರನ ಸುಲಿಯಲಿ
ಜಗದ ಕೆಟ್ಟುದೆಲ್ಲ ಬಂದು
ಇಲ್ಲೆ ಹೆಪ್ಪುಗಟ್ಟಲಿ!
"ಎಲ್ಲ ಅವನ ಲೀಲೆಯು!"
ಲೀಲೆಯಂತೆ ಲೀಲೆಯು!

ಎಲ್ಲಿಹನೋ ದುರುಳ ದೇವ?
ಅದೆಲ್ಲಿಹನೋ ಜಗವ 'ಕಾವ'?
ಎಳೆದು ತಾರೊ ಇಲ್ಲಿಗೆ
ಇಂತು ಲೀಲೆಯಾಡುವವನ
ಹಾಕಬೇಕು ಗಲ್ಲಿಗೆ!

ಸಾಕು ಮಾಡೊ! ಒಡ್ಡದಿರೆಲೊ
ಸಗ್ಗದ ಪ್ರಲೋಭನ!
ನರಳಿದರೂ ಇಲ್ಲಿ, ಮುಂ-
ದಿರುವ ಸುಖದ ಕಥನವ!
ಕೊಡನು ಕೈಯೊಳಿರುವ ಕಲ್ಲ!
ಕೊಡುವನೆ ಮುಚ್ಚಿಟ್ಟ ಬೆಲ್ಲ!

ಬುವಿಯ ಗೋಳ ಕಡಿಮೆ ಮಾಡ-

ಲವಗೆ ತ್ರಾಣವಿಲ್ಲವೆ ?
ಇಲ್ಲ ಇಚ್ಛೆಯಿಲ್ಲವೆ ?

ತ್ರಾಣವಿದ್ದು ಇಚ್ಛೆಯಿರದ
ಭಂಡನಾತನೆ ?
ಇಚ್ಛೆಯಿದ್ದು ತ್ರಾಣವಿರದ
ಷಂಡನಾತನೆ ?
ಇಚ್ಛೆತ್ರಾಣ ಎರಡುಮಿರದೆ
ಬರಿದೆ ಸೋತನೊ ?
ಇಚ್ಛೆ ತ್ರಾಣ ಎರಡುಮಿರಲು
ಏಕೆ ಕೂತನೊ ?

*　　　*　　　*

ಇಲ್ಲದಿರುವ ದೇವರನ್ನು
ಸುಮ್ಮನೇಕೆ ಬೈಯಲಿ :
ಬರಿಯ ಗಾಳಿಯನ್ನು ಗುದ್ದಿ
ಸುಮ್ಮನೇಕೆ ನೋಯಲಿ !
ವಿಚಾರ ಮಥನ ಮಾಡಿಬಿಡು !
ಇದೊಂದು ಮಾತ ಮನದಿ ನೆಡು :

ನರನ ಬಾಳ ಶಿಲ್ಪಿ ನರನೆ !
ದೇವ ಮನದ ಭಯದ ರಚನೆ !

# ತುಂತುರುಗಳು

ಪೋಪೋಪೆಡೆ ಹಿಟ್ಲರ ಪಡೆ
ಹಾಕಿದರೂ ಮುಟ್ಟ
ಧೃತಿಗೆಡದಲೆ ಹೊಗೆಯುಗುಳುವ
ಚರ್ಚಿಲ್ಲನ ಚುಟ್ಟ ;
ಜಡಿದರು ಮಳೆ, ಪೊತ್ತರು ಇಳೆ
ಉರಿಬಿಸಿಲಿನ ಕಾಟ
ವಿರಮಿಸುತಲಿ ಮಲಗುವ ಸೋ-
ಮಾರಿಯ ಸಿಗರೇಟ ;
ಜ್ಞಾಪಿಸುವೊಲು ಸಿಂತಿವೆ ಭ-
ದ್ರಾವತಿಯೊಳು, ರಮಣಿ
ಗಗನವನೇ ತಿವಿಯುವವೊಲು
ಹೊಗೆಯುಗುಳುವ ಚಿಮಣಿ !

*　　　*　　　*

" ಯಾವ ಆಟಾಮಿಕ್ಕು ಬಾಂಬು
ನನ್ನ ಮುಂದೆ ನಿಲ್ವುದು ?
ಯಾವ ಡೈನಮೈಟು ತಾನೆ
ನನ್ನ ಧುರದಿ ಗೆಲ್ವುದು ?
ಯಾವುದಕ್ಕೊ ಈ ಜಗದಿ
ನನ್ನ ಮಾನ ಸಲ್ವುದು ? "
ಎಂದು ವೃಥಾ ಕೂಗಿ ಕರಟ
ಆರ್ಭಟಿಸುತಲುರಿವುದು !

*　　　*　　　*

ಬಿಸಿನೀರ ಕಾವಿನಿಂ
ದವಳ ಮೊಗ ಕೆಂಪೇರಿ
ದುದ ಕಂಡು ನನ್ನ ಮನ ಕುದಿಯಿತಲ್ಲ !
ಬಿಸಿನೀರೆ ! ನೀ ಧನ್ಯ !

ಅವಳ ಮೊಗವನು ನೀನು
ಮುತ್ತಿಟ್ಟು ಕೆಂಪೇರಿಸಿರುವೆಯಲ್ಲ!

* * *

" ಹಗಲು ಇರುಳು ನಾನು ಕಾದ
ಸವಿಯ ಹಣ್ಣ ತಿರುಳನು
ಸವಿದು ತಿಂಬರಲಾ ಜನರು
ಬಗೆಯುತೆನ್ನ ಕರುಳನು
ಹಾಳು ಜನರು ಕಾಲನಿಡಲಿ
ಕೈಯಕೊಡುವೆ '' ನೆನ್ನುತ
ಬಾಳೆ ಹಣ್ಣ ಸಿಪ್ಪೆಯಿಹುದು
ರಸ್ತೆಯೊಳೇ ಕಾಯುತ!

* * *

" ಧೂಳು ಹಾರದಿರಲೆನುತ್ತ
ಟಾರ ರೋಡು ಹಾಕಿದ!
ಅಹುದು, ಒಪ್ಪಿಕೊಂಬೆ, ನನ್ನ
ನೇನೊ ಸೋಲ್ಗೆ ನೂಕಿದ!
ಆದರೇನು ಮ್ಹಾಡಬಲ್ಲ?
ನಾನುಗುಳ್ವೆ ಕರಿಹೊಗೆ!"
ಎನುತದೊಂದು ಮುರುಕು ಕಾರು
ಸಾರುತಿತ್ತು ಊರಿಗೇ!

* * *

ಭೂತವಾದರು ಸರಿಯೆ ಮನುಜಗೆ
ಹೆದರಿ ನಿಲ್ಲದು ಅರೆಚಣ.
ಎಷ್ಟು ಧೈರ್ಯವೊ ಮೂಗ ಮೇಲೆಯೆ
ಬಂದು ಕೂರ್ವುದು ಈ ನೊಣ!

* * *

ಕರಿಯ ಹುಡುಗಿಯು ನಗಲು ಕಾಣುವ

ಬಿಳಿಯ ಹಲ್ಲಿನ ಮಿಂಚೊಲು
ಬೆಂಗಳೂರಿನ ಟಾರ ರೋಡೊಳು
ಬೆಣಚು ಕಲ್ಲಿನ ಗೊಂಚಲು!

* * *

ಮರಗಳೆಲೆಯ ನಡುವೆ ಕಾಂಬ
ತುಂಬುವೆರೆಯ ಚೆಲುವಿಗೆ
ಸಾಟಿಯೇನು ಬರಿಯ ಕಣ್ಗೆ
ತೋರ್ಪ ಚಂದ್ರಮಂಡಲ ?—
ಒಡಲು ಕಂಡು ಕಾಣದಂಥ
ಅರ್ಧ ನಗ್ನ ಸುಂದರಿ
ಮನ ಸೆಳೆವೊಲು ಸೆಳೆವಳೇನು
ಪೂರ್ಣನಗ್ನ ರಮಣಿಯು !

# ಇದಾವ ಶಕ್ತಿ ?

ಇದಾವ ಶಕ್ತಿಯಿಂತು ನನ್ನ
ನಿನ್ನೆಡೆಗೆ ಸೆಳೆವುದು ?
ಇದೇಕೆ ನಿನ್ನ ಕಂಡರಿಂತು
ದುಡಿಯೊಲಿದೆಯು ಬಡಿವುದು ?
ಮಧುರ ದುಃಖ ಸುಳಿವುದು ?

ಪಾಶವೀ ಕಾಮುವೆನಲೆ ?
ರಸವ ಹೀರಿ ಸಿಪ್ಪೆಯುಗುಳಿ ಬಿಸುಡುವಂತೆ ಕಬ್ಬನು
ಹೆಣ್ಣ ಹೀರ್ವ ಕಾಮಿ ಕೂಡ ನೀ ಕುರೂಪಿ ಎಂಬನು !
ಸ್ಫಟಿಕ ಸ್ವಚ್ಛ ಪ್ರೇಮವೆನಲೆ ?
ತುಟಿಗೆ ತುಟಿಯ ಎದೆಗೆ ಎದೆಯ ಬೆಸೆದು ನಿನ್ನ ತನುವೊಳು
ನನ್ನ ಕರಗಿಪುತ್ಕಟೇಚ್ಛೆ ವೊಳಗುತಿಹುದು ಎದೆಯೊಳು
ಅಂತಾದೊಡೆ,
ಇದಾವ ಶಕ್ತಿಯಿಂತು ನನ್ನ
ನಿನ್ನೆಡೆಗೆ ಸೆಳೆವುದು ?
ಇದೇಕೆ ನಿನ್ನ ಕಂಡರಿಂತು
ದುಡಿಯೊಲಿದೆಯು ಬಡಿವುದು ?
ಮಧುರ ದುಃಖ ಸುಳಿವುದು ?

ನಿನ್ನ ನಡೆಯು ದೀಪದ ಕುಡಿಯಂತೆ ಬಾಗಿ ಬಳುಕದು !
ನಿನ್ನ ಜಡೆಯು ನಾಗರವನು ಎಳ್ಳನಿತೂ ಹೋಲದು !

ಹಾಲುಕೆನೆಯು ನಗುವ ಬಣ್ಣ ನಿನ್ನ ಪಾಲಿಗಿಲ್ಲವು !
ವಿಶಾಲ ನೇತ್ರಗಳನು ಪಡೆವ ಪುಣ್ಯ ನಿನ್ನದಲ್ಲವು !

ಭಾವಿಸೆ ನೀ ಕುಬ್ಜೆ ; ಬಗ್ಗಬೇಕು ತುಟಿಯ ಸಂಧಿಸೆ
ತಿರೆಯ ಮರೆತು ನಿನ್ನ ತೋಳ ನಡುವೆ ಹಿಡಿದು ಬಂಧಿಸೆ !

" ನಿನ್ನ ಕೆನ್ನೆ ದಪ್ಪವೆಂದು ಜರೆವ ಜನರು ಜರೆಯಲಿ !
ನನಗೆ ಅವೇ ರಸಪೂರಿಯು ಮಾವಿನ ಫಲ ತಿರೆಯಲಿ !

“ ದಿಟವು ನಿನಗೆ ದಪ್ಪ ತುಟಿಯು, ನಾನೆ ಅದನು ಕಾಂಬೆನು !
ತುಟಿಯಿಲ್ಲದ ಬಾಯಿಗಿಂತ ಇದೇ ಮೇಲು ಎಂಬೆನು !

“ ಕಿರಿದಾದರು ನಿನ್ನ ನೇತ್ರ ಅದರ ಕಾಂತಿಯಂಥದು !
ಮೋಟಾದರು ನಿನ್ನ ಜಡೆಯು ಅದರ ಲಾಸ್ಯವೆಂಥದು ! ”

ಎನುತಲೆನ್ನ ಬುದ್ಧಿಯನ್ನೆ ಗಾಳಿಯೊಳಗೆ ತೂರುತ
ಇದಾವ ಶಕ್ತಿಯಿಂತು ನನ್ನ
ನಿನ್ನೆಡೆಗೆ ಸೆಳೆವುದು ?
ಇದೇಕೆ ನಿನ್ನ ಕಂಡರಿಂತು
ದುಡಿಯೊಲೆದೆಯು ಬಡಿವುದು ?
ಮಧುರ ದುಃಖ ಸುಳಿವುದು ?

ಇದೆಕೊ ನೋಡು ! ಈ ಹೆಣ್ಣು ! ಕಡೆದ ಬೊಂಬೆಯೇ ಸರಿ !
ಇಂಥ ಕಣ್ಣು ಮೂಗು, ತುಟಿಯು !—ಚೆಲುವಿಗು ಸಹ ಅಚ್ಚರಿ !

ಆದರೇಕೊ ನನ್ನನಿವಳ ದೇಹ ಸೆಳೆಯಲೊಲ್ಲದು !
ನಿನ್ನಲಿರುವಪೂರ್ವ ಜೀವಕಳೆಯೆ ಇಲ್ಲಿ ಕಾಣದು !

ನಗಲಿ ಜಗ, ಮುರಿದು ಮೊಗ
ತಿರೆಯೆಲ್ಲವು ‘ ಗಿಡ್ಡಿ ’ ಯೆಂದಸಡ್ಡೆಗೈವ ನಿನ್ನೆಡೆ
ಇದಾವ ಶಕ್ತಿಯಿಂತು ನನ್ನ
ನೊಂದೆಸಮನೆ ಸೆಳೆವುದು ?
ಇದೇಕೆ ನಿನ್ನ ಕಂಡರಿಂತು
ದುಡಿಯೊಲೆದೆಯು ಬಡಿವುದು ?
ಮಧುರ ದುಃಖ ಸುಳಿವುದು ?

# ಇಂದು ನಾನು ಧನ್ಯನು

೧

ಇಂದು ನಾನು ಧನ್ಯನು!
ನನ್ನ ತುಟಿಯೊಳುಕ್ಕಿ ಬಂದ
ಮುಗುಳುನಗೆಗೆ ಮಾರುನುಡಿ
ದೊರಕಿತಹಾ ನಿನ್ನಧರದಿ
ಚಿಗುರುತಿರಲು ನಗೆಯ ಕುಡಿ!

ಇಷ್ಟು ದಿನವು ನಿನ್ನ ತುಟಿಯ
ಬಿಗಿದಿದ್ದಿತು ದುಗುಡವು!
ಇಂದೇತಕೊ ಅದು ಸಡಿಲಿತು
ಚಿದರಿತೆಲ್ಲ ಮೋಡವು!

ನಮ್ಮ ನಗೆಯ ಮಿಲನವನ್ನೆ
ನ್ಯೆಯ ಬೇಟವೆನಲು ಜನರು
ನಿನ್ನ ನಗೆಯು ಬತ್ತಿತು!
"ಎದೆಯೊಳೊಲವು ತುಂಬಿದ್ದರು
ನಗಲಸಾಧ್ಯ" ಎಂಬ ಭಾವ
ನಿನ್ನ ಗಂಟಲೊತ್ತಿತು!

ನಮ್ಮ ನಡುವೆ ಈ ದುಗುಡವು
ಎಂಥ ಘೋರ ಕಂದರವನು
ಒಡ್ಡಿತು ನಾ ಬಲ್ಲೆನು!
ಇನ್ನು ನಿನ್ನ ನಗೆಯು ತೆಂಗ-
ಸಾರ ಕೈಯ್ಯ ಚಾಚಿ ಕರೆಯೆ
ಈ ಕೊನೆಯೊಳೆ ನಿಲ್ಲೆನು!

ನಿನಗೆ ನಗಲಸಾಧ್ಯವೆಂಬು-
ದನ್ನು ನಾನು ತಿಳಿದು ತಿಳಿದು

೪೯

ನಿನ್ನ ನಗೆಗೆ ಕಾದೆನು !
ಸತ್ತೊಲವಿನ ಸಂಜೀವಿನಿ-
ಯಾವ ನಿನ್ನ ನಗೆಯ ಕಂಡು
ಇಂದು ನಾನು ಧನ್ಯನು !
ನನ್ನ ತುಟಿಯೊಳುಕ್ಕಿ ಬಂದ
ಮುಗುಳುನಗೆಗೆ ಮಾರುನುಡಿ
ದೊರಕಿತಹಾ ನಿನ್ನಧರದಿ
ಚಿಗುರುತಿರಲು ನಗೆಯ ಕುಡಿ !

೨

ನಮ್ಮ ನಗೆಯ ಮಿಲನವನ್ನೆ
ಮೈಯ ಬೇಟವೆನಲು ಜನರು
ನಿನ್ನ ನಗೆಯು ಬತ್ತಿತು !
"ಎದೆಯೊಳೊಲವು ತುಂಬಿದ್ದರು
ನಗಲಸಾಧ್ಯ" ಎಂಬ ಭಾವ
ನಿನ್ನಗಂಟಲೊತ್ತಿತು !

ಓ ಓ ಓ ಈ ಜನರದೆಂಥ ಹುಂಬರು !
ಒಲವಿನುಗಮವಲ್ಲು ಇವರು
ಅಕ್ರಮ ರತಿ-ಕೇಳಿಯನ್ನು
ಅದರಿನೊಗೆವ ಭ್ರೂಣಹತ್ಯೆ-
ಎಲ್ಲವನೂ ಕಾಂಬರು !
ಓ ಓ ಓ ಈ ಜನರದೆಂಥ ಹುಂಬರು !

"ಮೈಯಿರುವುದು ನಾಮಕೊ
ನಾಮವಿಹುದು ಮೈಯ್ಯಿಗೊ"
ಎಂಬ ಶಂಕೆ ಬರುವ ತೆರದಿ
ನಾಮಂಗಳ ಬಳಿತವೇನು !

ಮಿಕ್ಕ ಕಾರ್ಯವಾವುದಕೂ
ಬಿಡುವೆ ಇಲ್ಲವೆಂಬ ತೆರದಿ
ಆಹ್ನಿಕಗಳ ಹೊಡೆತವೇನು !
ತೂತಾಗುವ ತೆರದಿ ಕಿವಿಯು
ಸೋತು ಹೋಗುವನಕ ಬಾಯಿ
ವೇದಂಗಳ ಘೋಷವೇನು ?
ಮಡಿ-ಮೈಲಿಗೆ ವ್ಯಾಖ್ಯೆಯೇನು ?
''ಏಕಾದಶಿಯುಪವಾಸವು
ಇಂದು ಸರಿಯೊ ನಾಳೆ ಸರಿಯೊ''
ಎಂಬ 'ಗಹನ' ವಿಷಯಗಳಲಿ
ತೋರುವ ಉತ್ಸಾಹವೇನು !

ತಿರೆಯ ಪಾಪಗಳನು ಮುಚ್ಚಿ
ಹಾಕುವ ತೆರೆಯಂತೆ ಇರುಳು
ಬರಲು ಕದ್ದು ಊರಿನಾಚೆ
ಹೊಲಗೇರಿಗೆ ತೆರಳ್ವುದೇನು !
ಅಲ್ಲಿ ಹೊಲತಿಯೊರ್ವಳೊಡನೆ
ಮಲಗಿ ಸುಖಿಪ ಮುದವದೇನು !

ದಿನವೆಲ್ಲವು ಭಗವಂತನ
ನಾಮಾಮೃತದೊಳಗೆ ಮಿಂದ
ಬಾಯಿ, ಅವಳ ಬಾಯ್ದಂಬುಲ-
ವನ್ನು ಮೆಲ್ಲುತಿರುವುದಯ್ಯೊ !
ದಿನವೆಲ್ಲವು ಯಾರ ನೆರಳು
ಸೋಕಿದರೂ ನದಿಯ ಸ್ನಾನ-
ವಾಗುತಿತ್ತೊ, ಅವಳೆದೆಗಳೆ
ಇವನ ಎದೆಯ ನಾಮುಗಳನು
ಅಳಿಸುತಿಹವು ! ತನ್ನ ಮಗುವೆ

ತನ್ನ ಮುಟ್ಟಗೊಡದ ಇವಗೆ
(ದಿಟವೆ ಇಂಥ ಪಾಪಿಗಳನು
ಮುಗ್ಧ ಹಸುಳೆ ಮುಟ್ಟಬಹುದೆ!)
ಅವಳ ಸನಿಹದಲ್ಲೆ ನಿದ್ದೆ!

ಎಂಥ ಪತನವಿದುವು ಗೆಳತಿ!
ಒಲವಿನ ವಿಮಲತೆಯನರಿವ-
ರೆಂತು ಈ ಮೂಢರು!
ಒಲಿದ ಎರಡು ಹೃದಯಗಳಲಿ
ಒಲಿದ ತಂದೆ ಮಕ್ಕಳಲ್ಲಿ
ಒಡಕನಯ್ಯೊ ತರುವರು!

ಓ ಓ ಓ ಈ ಜನರದೆಂಥ ಹುಂಬರು!
ಒಲಿವಿನುಗಮುದಲ್ಲು ಇವರು ಏನೇನನೊ ಕಾಂಬರು!

* * *

ಅಂದೆನ್ನನು ನೀನು ಕರೆದೆ
ನಿನ್ನನೇನೊ ಕಾಡಿರೆ
ಬಿಸಿಯ ಕಂಬನಿಯಲಿ ನಿನ್ನ
ಕೆನ್ನೆ ಹೂವು ಬಾಡಿರೆ!

"ಓ! ಗೆಳೆಯನೆ! ಬರದಿರಿನ್ನು
ನನ್ನ ಮನೆಯ ಸನಿಹಕೆ!
ಬಂದಾಹುತಿಯಾಗದಿರು
ಜನರ ಮನದ ಶಂಕೆಗೆ!
ಬಂದು ನೆಯ್ಯ ಹೊಯ್ಯದಿರು
ಜನರ ಬಾಯ ಬೆಂಕಿಗೆ"—
ಈ ನುಡಿಗಳು ನಿನ್ನ ಹೃದಯ-
ದಾಳದಿಂದ ಬಂದುದಲ್ಲ!

(ನಿನ್ನ ಕಣ್ಣ ನುಡಿವುದೆಲ್ಲ!)
ಎಂಬುದ ನಾ ಬಲ್ಲೆನು!
ಆದರೇಕೊ ನನ್ನ ಎದೆಗೆ
ಬರೆಯನಿಟ್ಟ ತೆರದೊಳಾಯ್ತು
ನಿನ್ನ ಈ ನುಡಿಗಳು!

ನಿನ್ನ ಕಣ್ಣು ಸುರಿಸುತಿರುವ
ಕಂಬನಿಗಳ ತುಟಿಯೊಳೆ
ಹೀರಲೆಂದು ಬಗೆದೆನು!
ಬಾಡಿಹೋದ ಕೆನ್ನೆ ಹೂವ
ಮುತ್ತಮಾಲೆಯಿಂದ ಮತ್ತೆ
ಅರಳಿಸೆ ನಾ ಬಯಸಿದೆ!
ಆದರೆನ್ನ ನಾವುದೋ
ಶಕ್ತಿ ತಡೆದು ನಿಲಿಸಿತು!
ದುಃಖವಾರಿನಿಧಿಯ ಪಾಲ್ಗೆ
ನನ್ನ ನಕಟ ಸಲಿಸಿತು!

ಅಕಟ ಇನ್ನು ನಿನ್ನ ಮನೆಗೆ
ಬರದೊಲಾಯ್ತೆ ಗೆಳತಿಯೆ!
ಇನ್ನಿಲ್ಲವು ನಿನ್ನ ಕಣ್ಣ ನಿನ್ನ ನಗೆಯ ಆದರ!
ಇನ್ನು ನೀನು ಜಿಂಕೆಯಂತೆ
ಚಿಮ್ಮಿ ಬಂದು ಸನಿಹದಲ್ಲೆ
ಕುಳಿತು ಹರಟಲಾರೆಯಯ್ಯೊ!
ಇನ್ನು ನಿನ್ನ ಕೆಂದುಟಿಯನು
ಹುಸಿಯ ಮುನಿಸಿನಿಂದ ನೀನು
ತುಸು ಬಿರುಕಿಸಿ ನೋಡಲಾರೆ!

ಇನ್ನು ನಾನು ಬಂದೆನೆನುವ

ಸಡಗರದೊಳೆ ಓಡಾಡುತ
ನಲಿವ ಚೆಲುವ ಸವಿಯಲಾರೆ!

ಇನ್ನು ನಿನಗೆ ಬೇಕಾದುದ
ತಂದುಕೊಡುವ ಭಾಗ್ಯವೆಲ್ಲ
ಮಾಯವಾಯಿತಕಟ ನೀರೆ!

ಬೇಡ ಮುತ್ತು, ಬೇಡ ಬೇಟ,
ನಿನ್ನ ಮುಖವ ಕಾಂಬ ಸುಖವೆ,
ನಿನ್ನ ಕಣ್ಣು ನಿನ್ನ ನಗೆಯ
ಬಲೆಗೆ ಸಿಲುಕಿ ಮೀನಿನಂತೆ
ಪರದಾಡುವ ಸುಖವದೊಂದೆ
ಸಾಕೆಂದಿರೆ ನಾನು ಗೆಳತಿ
ಜನರದನೂ ಸಹಿಸಲಿಲ್ಲ!

ಓ ಓ ಓ ಈ ಜನರದೆಂಥ ಹುಂಬರು!
ಒಲಿವಿನುಗಮುದಲ್ಲು ಇವರು ಏನೇನನೊ ಕಾಂಬರು!

೩

ಇದೆಲ್ಲ ಗೆಳತಿ ಹಳೆಯ ಕತೆಯು!
ದಿಟವು, ಬಲ್ಲೆ ವ್ಯಥೆಯ ಕಥೆಯು!
ಆದರೇಕೊ ನಿನ್ನ ಬಿಗಿದ
ಮೊಗವ ಕಂಡು ನನ್ನ ಮನವು
ಉರಿಯುತಿತ್ತು ಕೋಪದಿ!
ಇಂದದೆಲ್ಲ ಮಾಯವಾಯ್ತು
ನಿನ್ನ ನಗೆಯ ಸ್ಪರ್ಶದಿ!

ತನಗೆ ತಾನೆ ತಿಳಿಯದಂತೆ
ಮೋಡದ ಮರೆಯಿಂದಲಿಣುಕಿ

ನೋಡಿ ನಲಿವ 'ಬೆಳ್ಳಿ'ಯಂತೆ
    ದುಗುಡದ ತೆರೆಯನ್ನು ಕೊಂಚ
    ಸರಿಸಿ, ಮುಗುಳುನಗೆಯು ಉಕ್ಕಿತು!
ಸತ್ತೊಲವಿನ ಸಂಜೀವಿನಿ-
ಯಾದ ಆ ನಗೆಯ ಕಂಡು
    ಇಂದು ನಾನು ಧನ್ಯನು!
ನನ್ನ ತುಟಿಯೊಳುಕ್ಕಿ ಬಂದ
    ಮುಗುಳುನಗೆಗೆ ಮಾರುನುಡಿ
ದೊರಕಿತಹಾ ನಿನ್ನಧರದಿ
    ಚಿಗುರುತಿರಲು ನಗೆಯ ಕುಡಿ!

# ಬಗೆಯ ಕನ್ನಡಿ

ಬಗೆಗೆ ಕನ್ನಡಿ ಹಿಡಿದೊಲಿಂದಿಹುದಹಾ ಪ್ರಕೃತಿ !
ಹರಹಿದ ಕೆರೆಯ ಕರೆ ತೆರೆಯ ಸಿರಿಯ ತಬ್ಬುತಿರೆ;
ರಂಗು ರಂಗು ನಭದೊಳು ಹುಚ್ಚಾಗಿ ಹಬ್ಬುತಿರೆ ;
ಹೊತ್ತಿರಲು, ಎಲ್ಲೆಲ್ಲು ಹರಡುತಿಹ ಮಬ್ಬ, ಕ್ಷಿತಿ ;
ಬೆಳ್ಳಿಯಂಚಿನ ಕರಿಯ ಮೋಡ ಸುತ್ತಿರೆ, ನಡುವೆ
ತಿಳಿನೀಲದಾಗಸದ ಸರ ಪ್ರಿಯೆಯ ಕಣ್ಣುಗಳ
ಹೋಲೆ, ಹಬ್ಬಿರುವ ವಿಧವಿಧದ ಕೆಂಬಣ್ಣಗಳ
ಹಿಂಡು, ಕೆಂಗಣ್ಣಿನ ಸಮಾಜದಂತಿರಲಿದುವೆ
ಕೆರೆಯ ತೆರೆಯವಳು ಚಾಚುತ್ತಿಹ ಕರಗಳೊಲಿರೆ,
ಅದ ತಡೆವ ಸಂಪ್ರದಾಯದೊಲಿರಲು ಕೆರೆಯ ಕರೆ ;
ಬೇಡಬೇಡೆಂದನಿತು ಬೆನ್ನಟ್ಟಿ ಬರುತಿರುವ
ಥಳಕ ಬೆಡಗಿಯರ ನೆನಹುಗಳಂತೆ, ಎದುರಿರುವ
ಕರೆಯ ದೀಪದ ನೆರಳು ಕೈಗಳನು ಚಾಚುತಿರೆ ;
ಬಗೆಗೆ ಕನ್ನಡಿ ಹಿಡಿದೊಲಿಂದಿಹುದು ಸುತ್ತ ತಿರೆ!

# ನೆನೆದೆ ನೆನೆಯುವೆ

ನೆನೆದೆ ನೆನೆಯುವೆ ನೆನೆದೆ ನೆನೆಯುವೆ
ಒಂದು ದಿನ ನೀನೆನ್ನನು—
ನಿನ್ನೆದೆಯ ಕದ ತಟ್ಟಿ ಪ್ರೇಮದ
ಭಿಕ್ಷೆ ಬೇಡಿದ ನನ್ನನು! ‖ ಪಲ್ಲವಿ ‖

ಇಂದು, ದಿಟ, ನೀನೆನ್ನ ನಳಲಿನ
ಕಮರಿಯೊಳಕೆ ತಳ್ಳುತ
ಗಟ್ಟಿ ನೆಲದೊಳೆ ನಿಂದೆನೆನ್ನುತ
ಭಾವಿಸಿಹೆ ಮುದಗೊಳ್ಳುತ!
ಅರಿಯೆಯೌ ನೀ! ಕಾಲ ಕೆಳಗಣ
ಭೂಮಿ ದುಗುಡದ ಭಾರದಿ
ಕುಸಿದು ಬೀಳುವುದೊಂದು ದಿನ, ನೀ-
ನಂದು ಪಶ್ಚಾತ್ತಾಪದಿ—

ಅದ್ದಿ ದುಗುಡದೊಳಿರಿಸಿದಂತಿಹ
ಈ ಪ್ರಪಂಚದ ಬಾಳೊಳು
ಆಳಲ ಸವಿಯದೆ ನಡೆವೆನೆನ್ನುವ
ಮಂದಮತಿಗಳ ಸಾಲೊಳು
ಕಣ್ಣುಗಳ ಮುಚ್ಚಿಂದು ನಡೆದಿಹೆ
ಸವಿಗನಸುಗಳ ಕಾಣುತ.
ಕನಸ ರಂಗಿನ ಗುಳ್ಳೆಯೊಡೆಯದೆ ?
ಅಂದು ಕಂಬನಿ ಕಾರುತ—

ಓರೆನೋಟದ ಗಾಳವೆಸೆಯುತ
ಸವಿನುಡಿಯ ನೊಣ ಸಿಕ್ಕಿಸಿ
ಗಿರುಗಿರನೆ ತಿರುಗಿಸುತ ಮೀನೊಲು,
ಕೊರಲ ರಕುತವ ಕಕ್ಕಿಸಿ,
ಬೆಸ್ತನೊಲು, ದಯೆಯಿಂದ ಕೊಲ್ಲದೆ

ಮತ್ತೆ ಜೀವನಕೆಸೆಯುತ
ನಡೆದುದನು ನೀ, ನಿನಗಿದೇ ಸಂ-
ಭವಿಸೆ, ಕೈಕೈ ಹೊಸೆಯುತ—

ಎನಿತೆನಿತೊ ಎಂಥೆಂಥದೋ ಗಾ-
ಯಗಳ ಮರೆಸುವ ಮದ್ದನು
ತನ್ನೊಳಗೆ ಸಂಗ್ರಹಿಪನೆಂಬರು
ಕಾಲನೆನ್ನುವ ವೈದ್ಯನು !
ಆದರೆನ್ನೆದೆಗಾಯ ಮರೆಸಲ-
ಶಕ್ತನಾ ವೈದ್ಯರ ಗುರು !—
ಜಾರೆ ಕೂಸನು ತಿಪ್ಪೆಗೆಸೆವೊಲು
ಇಂದು ನೀನಿದ ಮರೆತರೂ—

ಇಂದು, ಸರಿ, ನೀ ಬಿಟ್ಟೆ ಚಿಂತೆಯು ;
ಹಿಂದೆ ಸಹ ಸುಖ ಕಂಡೆನೆ ?
ನಿನ್ನ ಪಡೆಯಲು ಬೆಂದುದಲ್ಲದೆ
ಸವಿಯನಾದರು ಉಂಡೆನೆ ?
ಆದರೆನ್ನೊಲೆ ತಪಿಪೆ ನೀನೆಂ-
ದಿರಲು, ಜಾರಿದೆ ತೊರೆಯುತ !
ಮುಂದಕೆಂದಿಗು ಎಡವದಿರುವೆಯ !
ಅಂದು ಕೂಗುತ ಕರೆಯುತ—

ಆಳಲಿಗೆನ್ನನು ತಳ್ಳಿ ಸೊಗವನು
ಪಡೆವ ಭ್ರಾಂತಿಯ ಕಟ್ಟಿಡು !
ಮುಳ್ಳ ಬಿತ್ತುವ ಹೂವ ಬೆಳೆಯುವ
ಆಸೆಗಳ ನೀ ಬಿಡು ಬಿಡು !
ಬರಿಯ ಮುಳ್ಳನೆ ಕಂಡು, ಬಿತ್ತಿದ
ಬೀಜ ನೆನಪಿಗೆ ಬರುವೊಲು

ದುಃಖ ಕವಿಯಲು ಹಿಂದ ನೆನೆಯುತ
ಅತ್ತಕಟ ಎದೆಯೊಡೆವೊಲು—

ಪುರುಷನೊಬ್ಬನದೊಂದು ಹೆಣ್ಣನು
ಒಲಿದರವಳೂ ಅವನನು
ಒಲಿಯಲೇ ಬೇಕೆಂಬ ನಿಯಮವು
ಇಲ್ಲ, ದಿಟ, ಅದ ಬಲ್ಲೆನು !
ಆದರೇನಿದು ನೀನು ಗೈದುದು
ಒಲಿದವೊಲೆ ನೀ ನಟಿಸುತ
ಇದ್ದಕಿದ್ದೊಲೆ ತೊರೆದೆಯೆನ್ನನು ;
ಇದನು, ದುಗುಡದಿ, ಕೊರಗುತ—

ರೋಗ, ಬಡತನ, ಕಲಹ, ತಟವಟ,
ಗರ್ವಭಂಗವು, ಬೇಸರ,
ಒಲಿಯದಿಹ ಪತಿ, ಒಂದೆ ಇರುಳಿಗೆ
ನಶಿಪ ಕಾಮದ ಕಾತರ—
ಅಳಲ ವೇಷಗಳಿಂತು ವಿಧ ವಿಧ-
ವೆಂಬುದನು ನೀ ಮರೆಯುತ
ಜಾರಲೆತ್ನಿಸಿ ವಿಷಮವ್ಯೂಹದಿ
ಬಿದ್ದೆ ಬೀಳುವೆ ! ಕೊರಗುತ—

ಬರುವ ಬಾಳೊಳು ನಿನಗೆ ಕೆಟ್ಟುದ
ಬಯಸುವುದು, ದಿಟ, ಸಲ್ಲದು.
ಬಲ್ಲೆ ; ನಿನ್ನಯ ಕ್ರೌರ್ಯವೆನ್ನನು
ಅಂಥ ಮಟ್ಟಕೆ ಒಯ್ಯದು !
ಆದರೆನ್ನೆದೆಯೊಳಗಿನಾಳದಿ-
ನಾವುದೋ ದನಿ ಚಿಮ್ಮಿದೆ
ಎಡೆಬಿಡದೊಲುಕ್ಕುತ್ತ, ಸೇಡೊಳು
ಷಂಡ ರೋಷದಿ ಚೀರಿದೆ :

೫೯

“ನೆನೆದೆ ನೆನೆಯುವೆ ನೆನೆದೆ ನೆನೆಯುವೆ
ಒಂದು ದಿನ ನೀನೆನ್ನನು—
ನಿನ್ನೆದೆಯ ಕವ ತಟ್ಟಿ ಪ್ರೇಮದ
ಭಿಕ್ಷೆ ಬೇಡಿದ ನನ್ನನು !”

# ಅಂದು—ಇಂದು

ನನ್ನ ನಿನ್ನ ನಡುವೆಯೇಕೊ
ಏನೊ ವಿರಸ ಸುಳಿಯಿತು.
ಮನದ ಕಣ್ಣಿಗದುವು ರಂಗು-
ಗಾಜ ತೊಡಿಸಿಬಿಟ್ಟಿತು !

ತಿಳಿಯು ನೀರು ಹೊಳೆವ ನಿನ್ನ
ಕಣ್ಣ ತಂಗೊಳದಲಿ
ಕಂಡೆನಯ್ಯೊ ಕ್ರೂರ ನ-
ಕ್ರಾಳಿಗಳನು ಭಯದಲಿ.

ಮಿಂಚಿನಂತೆ ಚಂಚಲಿಸುವ-
ಪಾಂಗ ಗರ್ಭದಾಳದಿ
ಬಂಡೆಯೆದೆಯ ಒಡೆವ ಸಿಡಿಲ-
ಮರಿಗಳೆನಿತೊ ಕಂಡೆನು !

ಕೆಂಪು ತಂಪುಗಳನು ಸುರಿವ
ನಿನ್ನ ತುಟಿಯ ದಳದಲಿ
ಬಂಡುಣಿಯುಣಿ 'ಡ್ರಾಸಿರ*'ದ
ರುದ್ರ ಕಾಂತಿ ಕಾಂಬೆನು !

ದಂತದಾಡಿವವು ಕರೆವ
ನಗೆಯ ಮಧುರ ರಸದಲಿ
ಕೃತ್ರಿಮದ ವಿಷವು ಅಡಗಿ
ಕೂತ ಪರಿಯನರಿವೆನು !
ನಿನ್ನನೊಲಿವ ಮುನ್ನ ಬುದ್ಧಿ
'ನೀ ಕುರೂಪಿ'ಯೆಂದಿತು

---

* ನೊಣಗಳನ್ನು ಆಕರ್ಷಿಸುವ, ಅನಂತರ ಅವುಗಳನ್ನು ಕಬಳಿಸುವ ಒಂದು ಮಾಂಸಾಹಾರಿ ಪುಷ್ಪ.

ಅದನು ನಕ್ಕು ಭಾವ ಸಿನ್ನ
  ಕೊರತೆಗಳನೆ ಮೆಚ್ಚಿತು.

ಹೆಚ್ಚು ನುಡಿಯಲೇಕೆ ? ಸಿನ್ನ
  ಒಂದೊಂದು ಹಾವವೂ
ಅಂದು ಕಣ್ಗೆ, ಹಬ್ಬವೆಸಿಸೆ,
  ರಂಗುಗಾಜ ತೊಡಿಸಿತು.

ಬುದ್ಧಿ-ಭಾವ ಯುದ್ಧದಲ್ಲಿ
  ಭಾವವಿಂತು ಗೆದ್ದಿತು.
ಸುಪ್ತ ಚಿತ್ತಗೋರಿಯೊಳಗೆ
  ಬುದ್ಧಿಯನ್ನು ಹೂಳಿತು.

ಭಾವದ ಮೊನೆಯನ್ನು ಸಿನ್ನ
  ಕ್ರೌರ್ಯ ಮೊಂಡುಮಾಡಿತು
ಪ್ರೇತದಂತೆ ಬುದ್ಧಿಯೆದ್ದು
  ಅದನೇಳಿಸಿ ಕಾಡಿತು.

ಹಿಂದೆ ತನಗೆ ಬಂದ ಸೋಲ
  ನೆನೆದು ಬುದ್ಧಿ ಸೇಡೊಳು
ವಿಧ ವಿಧ ವಿಧ ಭೂತಗನ್ನ-
  ಡಿಗಳ ಕಣ್ಗೆ ಕಟ್ಟಿತು!

*            *            *

ಹೃದಯಪಾತ್ರೆಯನ್ನು ತುಂಬಿ
  ತುಳುಕುತಿದ್ದ ದುಗುಡವು
ಮಾಯವಾಯ್ತು, ದಿಟವು, ಆದ-
  ರದನು ಶೂನ್ಯ ತುಂಬಿದೆ.

ಶೂನ್ಯದ ಹರಹನ್ನು ಕಂಡು

ಮನವು ಬೆಚ್ಚಿ ನಡುಗಿದೆ
ಅದನು ತುಂಬೆ, ಮತ್ತೆ ಮತ್ತೆ
ಅಳಲನೇ ಕರೆದಿದೆ.

ಅಳಲು ಕೂಡ ಇಲ್ಲವೆಂಬ
ಅಳಲು ಅದನು ಕಾಡಿದೆ!
ಈ ವಿಚಿತ್ರ ತಾಪದಲ್ಲಿ
ಒಂದೆ ಸಮನೆ ಬಾಡಿದೆ!

ನನ್ನ ನಿನ್ನ ನಡುವೆಯೇಕೊ
ಏನೊ ವಿರಸ ಹುಟ್ಟಿತು!
ಮನದ ಕಣ್ಣಿಗದುವು ರಂಗು-
ಗಾಜ ತೊಡಿಸಿಬಿಟ್ಟಿತು!

# ಗುಟ್ಟು

ನನ್ನೆದೆಯ ಒಂದೊಂದು ಬಡಿತವು
ಬುವಿಯ ಕಂಪವ ನಗುತಿದೆ!
ರಕುತ, ಭೂಮಿಯ ಬಸಿರ ಬಗೆಯುವ
'ಲಾವ'ದೊಲು ಕುದಿಯುತ್ತಿದೆ!
ಬಿರುವೆರಲ ಉಸಿರೊತ್ತಿದೆ!
ಆದರೂ ಸಹ ತೊಲಗದೆಯೆ ನೀ
ನೆಂತು ನೆಲಸಿಹೆ ಅಲ್ಲಿ ಕಾಮಿನಿ ?
ಇವುಗಳೆಲ್ಲವು ಒತ್ತಿರೆ ?

*    *    *

ಮರೆತೆ ಮರೆತೆನು! ಎಂಥ ಮೂಢನು!
ನಿನ್ನನೊಂದೂ ಮುಟ್ಟದು!
ಎದೆಯೊಳಗೆ ನೆಲಸುತ್ತಲವುಗಳ
ನೀನೆ ಸೃಷ್ಟಿಪೆ!—ಗುಟ್ಟದು!

# ಸುಗ್ಗಿಯೆಂದಿಗೆ ?

ಸುಗ್ಗಿಯೆಂದಿಗೆ ಸುಗ್ಗಿಯೆಂದಿಗೆ
ಮಾಗಿ ಕವಿದೀ ಚಿತ್ತಕೆ ?
ಎಂದು ಕೊನೆ, ಹಾ! ಎಂದಿಗೋ ಕೊನೆ
ಬಗೆಯ ದುಗುಡದ ಮೊತ್ತಕೆ ?

ಸೃಷ್ಟಿಯೆಲ್ಲಕು ತೆರೆಯ ಹಾಕಿವ
ತೆರದೊಳಿಬ್ಬನಿ ಕವಿದಿದೆ
ಅದನು ಕರಗಿಸಿ ಅತ್ತ ಸರಿಸುವ
ರವಿಗೆ ಮನ ಹಾತೊರೆದಿದೆ !

ಇದ್ದ ಒಂದೆರಡಾಸೆ ನನೆಗಳು
ಮಂಜ ಭಾರದಿ ಕುಗ್ಗಿವೆ
ಕಂಬನಿಗಳೊಲು ಹುಲ್ಲ ಮೇಗಡೆ
ಹಿಮದ ಹನಿ ತೂಗುತ್ತಿವೆ.

ಸಾವ ಶೀತಲ ಸ್ಪರ್ಶದೊಲು ಚಳಿ
ಮೂಳೆಯೊಳಗನು ಕೊರೆದಿದೆ
ದುಗುಡ ಚಿಮ್ಮುತ ರವವ ಗೈವೊಲು
ಹಲ್ಲಿದೋ ಕಟಕಟಿಸಿದೆ !

ಭರವಸೆಯ ಹೊಂಬಿಸಲು ಕಾಣದು ;
ತನುವಿನಾಸೆಯು ಮಾಣದು
ಸಾವು ಕರೆಯದು ಬಾಳು ತೊರೆಯದು
ಅಕಟ ಎಂತಹ ನೇಣಿದು !

ಮನದ ಬನದೊಳು ಎಂದಿಗೋ ಮು-
ತ್ತೊಮ್ಮೆ ಪಿಕಗಳ ಗಾಯನ ?
ಜಗವ ಸೆಳೆಯುವ ಕಂಪಿಗೆಂದಾ-
ಗುವುದೊ ಗಾಳಿಯು ವಾಹನ ?

೭೫

ಹೆಣ್ಣಿನೊಲವಿನ ರಂಗುರಂಗಿನ
ಹೂಗಳರಳುವುದೆಂದಿಗೆ ?
ದುಂಬಿಗಳ ಹಿಮ್ಮೇಳ ಸಾಗಿರೆ
ಕಂಪ ಬೀರ್ವುದದೆಂದಿಗೆ ?

ಸುಗ್ಗಿಯೆಂದಿಗೆ ಸುಗ್ಗಿಯೆಂದಿಗೆ
ಮಾಗಿ ಕವಿದೀ ಚಿತ್ತಕೆ ?
ಎಂದು ಕೊನೆ, ಹಾ! ಎಂದಿಗೋ ಕೊನೆ
ಬಗೆಯ ದುಗುಡದ ಮೊತ್ತಕೆ!

# ನೋಡಬೇಡ

೧

ನೋಡಬೇಡ ನೋಡಬೇಡ ನೋಡಬೇಡವೇ
ಇಂತು ನನ್ನನು!
ತೋಡಬೇಡ ತೋಡಬೇಡ ತೋಡಬೇಡವೇ,
ಕಣ್ಣಿನಲ್ಲಿ, ತೋಡಬೇಡ
ನನ್ನ ಎದೆಯನು!

ಸಾವಿರಾರು ಅರ್ಥಗಳನು
ಕಟ್ಟಿ ನಿನ್ನ ನೋಟಕಾನು
ಮಿಲ ಮಿಲ ಮಿಲ ನರಳುವಂತೆ ಆಡಬೇಡವೇ
ಆಡಬೇಡ ಆಡಬೇಡ ಆಡಬೇಡವೇ
ಕಣ್ಣಿನಲ್ಲಿ, ಆಡಬೇಡ
ನೂರು ಮಾತನು!

ನನ್ನ ಕಂಡು ಕಾಣದಂತೆ ದಾರಿಯನ್ನು ಹಿಡಿದು ಹೋಗು,
ಚಿಂತೆಯಿಲ್ಲ,
ನೀನು ನಿನ್ನ ಪಾಡಿಗೆ!
ಓರೆನೋಟದಂಬುಗಳನು ಚುಚ್ಚದಿರೇ ಚುಚ್ಚದಿರೇ
ಎದೆಯ ಜೇನ ಗೂಡಿಗೆ!
ಕರಿಯ ಮಿಂಚಿನಂತೆ ಹೊಳೆಸ
ಬೇಡ ಕಣ್ಣಗುಡ್ಡೆಯ!
ಎದೆಯ ಮೂಲ ಬಯಕೆಗಳಿಗೆ
ಕಟ್ಟಬೇಡ ಬಡ್ಡಿಯ!

೨

ಒಂದೆ ಎರಡೆ ನಿನ್ನ ನೋಟ ಗೈಯುತಿರುವ ಹಾವಳಿ?
ಒಂದೆ ಸಮನೆ ಪಟ ಪಟ ಪಟ ರೆಕ್ಕೆಬಡಿವುದೆದೆಯ ಬಾವಲಿ.
ಮೊದಲು, ಎದೆಗೆ ಕಿಚ್ಚನಿಡುವ
ನಿನ್ನ ಓರೆನೋಟವನ್ನೆ

ಕುರುಡನಂತೆ ನೋಡದೆನ್ನ ಪಾಡಿಗಾನು ಇದ್ದುಬಿಡುವ
ಹುಚ್ಚು ಆಸೆ ಮೊಳೆವುದು!
ಒಂದೆ ನಿಮಿಷ, ಈ ಆಸೆಗೆ
ವಿಘ್ನಕೋಟಿ ಬೆಳೆವುದು!
ಅಹಂಕಾರವೆದ್ದು ನಿಂತು
ಏಳಿಸೆನ್ನ ನುಡಿವುದಿಂತು:
"ಅಯ್ಯೋ! ಪೆಚ್ಚೆ! ನಿನ್ನನೊಲಿದು
ನೋಡುತಿಹಳು! ವಿಮುಖನಾಗಬೇಡ ನೀನು!"
"ಅಹುದು" ಎಂದು ತಾಳ ಹಾಕಿ
ಮೆರೆವುದೆದೆಯು ಮುದದೊಳು!
"ನನ್ನ, ಓವೊ, ನನ್ನ ಕಡೆಗೆ
ನೋಟಗಳನು ಚೆಲ್ಲುತಿಹಳು,
ಈಕೆ"ಯೆಂದು, ನಿನ್ನ ಬಯಸಿ
ಆಸೆ ಕುಣಿವುದೆದೆಯೊಳು!
ನೂರಾರು ಕನಸುಗಳನು
ಕಟ್ಟಿ ಕುಣಿವುದದರೊಳು!
ಕನಸ ಮತ್ತದೆನಿತು ಹೊತ್ತು!
ಮತ್ತೆ ತಿರೆಯ ಬಾಯ್ಗೆ ತುತ್ತು
ಈ ಎಲ್ಲ ಭ್ರಮೆಗಳು!

ಸಣ್ಣದೊಂದು ತೂತಿನಿಂದ
ಜಿನುಗಿ ಜಿನುಗಿ ಬರುವ ನೀರ
ಹೋಲಿ, ದನಿಯದೊಂದು, ಬಗೆಯು
ಕೆಣಕಿ ಕೆಣಕಿ ಕೇಳ್ವುದು:
"ಮರುಳೆ! ನಿನ್ನ ಕಂಡರೆನಗೆ
ನಗೆಯು ಬೆರೆತ ಮರುಕವು!
ಏಕೊ ನಿನ್ನ ನೋಡುವವಳ
ಒಲಿದಳೆಂದು ಭ್ರಮಿಸುವೆ!"

"ಏಕೊ ?"

ಯಾರು ಬಲ್ಲರಿದಕೆ ಮದ್ದ ?
ಏಕೊ, ಏನೊ, ಇನ್ನು ನನ್ನ ನಿಂತು ನೀನು
ನೋಡಬೇಡ ನೋಡಬೇಡ ನೋಡಬೇಡವೇ !
ತೋಡಬೇಡ ತೋಡಬೇಡ ತೋಡಬೇಡವೇ,
ಕಣ್ಣಿನಲ್ಲಿ, ತೋಡಬೇಡ
ನನ್ನ ಎದೆಯನು !
ಸಾವಿರಾರು ಅರ್ಥಗಳನು
ಕಟ್ಟಿ ನಿನ್ನ ನೋಟಕಾನು
ಮಿಲ ಮಿಲ ಮಿಲ ನರಳುವಂತೆ
ಆಡಬೇಡ ಆಡಬೇಡ ಆಡಬೇಡವೇ,
ಕಣ್ಣಿನಲ್ಲಿ, ಆಡಬೇಡ
ನೂರು ಮಾತನು !

# ನೋವು—ಸೊಳ್ಳೆ

ಹೇಳಲಾಗದಾವುದೋ ಒಂದು ನೋವದೊಂದೆ ಸಮನೆ
ಎದೆಯ ಕೊರೆವುದು.
ಹಣೆಯೊಳಿಲ್ಲವಯ್ಯ ಸುಕ್ಕು;
ಹುಬ್ಬೊಳಿಲ್ಲ ಗಂಟು, ಸಿಕ್ಕು ;
ಇದ್ದ ಕಡೆಯೆ ಇಹುದು ಕಣ್ಣು !—
ಎಲುಬುಗುಳಿಯ ಆಳಕೆ
ಇಳಿದೆ ಇಲ್ಲ—
ಕೆನ್ನೆಯಲ್ಲಿ ಗುಳಿಗಳಿಲ್ಲ!
ತುಟಿಗು ನಗೆಗು ದ್ವೇಷವಿಲ್ಲ !
ಬಿದ್ದಿಲ್ಲವು ಜೋತು ಮೊಗವು !—
ಒಟ್ಟಿನಲ್ಲಿ ದೇಹ ಭದ್ರ—
ಆದರೂನು,
ಎಷ್ಟೊ ದಿನದ ಬಳಿಕ ಗಂಟು ಬಿಚ್ಚಿ ತೆರೆದ ಪುಸ್ತಕದಲಿ
ಮೇಲ ಗಟ್ಟಿ ರಟ್ಟು ಭದ್ರ! ಒಳಗೆ ಹಾಳೆ ಗೆದ್ದಲುಣಿಸು!—
ಅಂತೆಯೇ,
ಸರಿಯಿದ್ದರು ದೇಹ ಮಾತ್ರ
ಹೇಳಲಾಗದಾವುದೋ ಒಂದು ನೋವದೊಂದೆ ಸಮನೆ
ಎದೆಯ ಕೊರೆವುದು.
ಭೋಂಕನೆದ್ದು ಮೈಯ ನೆಕ್ಕಿ ಬಾಳ ಸುಡುವ ತ್ರಾಣವಿಲ್ಲ
ಆದಕೆ; ಆ ಪುಣ್ಯ ಕೂಡ
ಇಲ್ಲವೆನಗೆ !
ಕೊಂಚ ಕೊಂಚ-
ವಾಗಿ ತಿಂದು
ಮತ್ತೆ ಚಿಗುರಲನುವುಗೊಟ್ಟು
ಎಂದೆಂದಿಗು ಕೊರೆಯುತಿರುವ ಆಸೆಯದಕೆ !
"ಇದೋ! ಇಲ್ಲಿ!
ಅಲ್ಲ, ಅಲ್ಲಿ !

ಎಲ್ಲಿ, ನನ್ನ ಹಿಡಿಯೊ ನೋಡುವ!"
ಎಂದೆನ್ನನು ಒಂದೆ ಸಮನೆ
ಆಡಿಸಾಡಿ,
ಚುಚ್ಚಿ ಚುಚ್ಚಿ
ನಗುತಲಿರುವುದು!
ಅದನು ಹಿಡಿಯೆ ನಾನು ಹೋಗಿ
ವಿಫಲನಾಗಿ ನನ್ನ ಪಾಡ ನಾನೆ ನೋಡಿ ನಗುವೆನು!
ಚಿತ್ರವೊಂದ ನೆನೆದು ಅದನು ಹಿಡಿಯುವಾಸೆ ಮರೆವೆನು:

ಸುತ್ತಲೆಲ್ಲ ಮಸಕು ಮಸಕು ಕತ್ತಲು!
ನಿದ್ದೆ ಮೆಲ್ಲನಿಳಿಯುತಿಹುದು ಮುತ್ತನೊತ್ತಲು!
ಅರ್ಧ ನಿದ್ರೆ
ಆಗ......
ಕಿವಿಯ ಬಳಿಯೆ ಗುಂಯ್ಯೆಂದು
ಗಾನಲಹರಿ ಕೇಳ್ವುದೊಂದು!
ಅದೇ ಘನಿಸಿದಂತೆ ಕಿವಿಗೆ ಸೊಳ್ಳೆಯೊಂದು ಸೋಂಕಲು,
ಅದ ತಪ್ಪಿಸೆ ಯುದ್ಧ ಮೊದಲು!
ಓಹೊ! ನನ್ನ ಎಚ್ಚರವನು ಅರಿತು
ತನ್ನ ಕುರಿತ ನನ್ನ ಭಾವಗಳನು ಗ್ರಹಿಸಿ
ತನ್ನ ತಲೆಯ ಬಾಲಕಿಟ್ಟು
ವಕ್ರನೋಟವನ್ನು ಬೀರಿ
ಮಾಯ!
ಮಾಯ?
ಒಂದು ಚಣವೆ, ಅಷ್ಟೆ!
ಮತ್ತೆ ಧಾಳಿ ಮೊದಲು!
ಗಾಳಿಗಿಂತ ಹಗುರವಾಗಿ
ಮೆಲ್ಲನಿಳಿದು ಕೆನ್ನೆಮೇಲೆ

೭೧

ಚುಚ್ಚಿ ಮುಳ್ಳ ರಕುತ ಹೀರಿ
ಹಾರಿ, ಜಾರಿ, ಮಾಯವು!
ಬಳಿಕ ನನ್ನ ಕೈಯ ಏಟು
ನನ್ನ ಕೆನ್ನೆಗೇ!
ಇದಕುತ್ತರ ನಗುವೊ ಅಳುವೊ?
ನೀವೆ ಹೇಳಿ!
ಮೊದಲು ಅಳು,
ಕಡೆಗೆ ನಗು!

# ನೆನಪುಗಳೇ!

ನೆನಪುಗಳೇ
ಬಾರದಿರಿ! ಬಾರದಿರಿ!

ಸೊಂಡಿಲಾಡಿಸುತ್ತ ಬಂದು
ಮೊದಲೆ ಕದಡಿಹೋದ ಕೊಳವ
ಮತ್ತೆ ಮತ್ತೆ ಕದಡುತ,
ಎರಡೆ ದಿನಕೆ ತಾನೆ ಬಾಡಿ-
ಹೋಗಲಿರುವ ಒಂದೊ ಎರಡೊ
ಹೂವುಗಳನು ಕಿತ್ತು ಬಿಸುಟು
ಘೀಳಿಡುವ ಆನೆಯಂತೆ
ಬಾರದಿರಿ! ಬಾರದಿರಿ!
ಮನದ ಕೊಳವು ತನಗೆ ತಾನೆ
ಬತ್ತಿಹೋಗಲನುವು ಕೊಡಿ!
ನುಗ್ಗದಿರಿ! ನುಗ್ಗದಿರಿ!
ನೆನಪುಗಳೇ :
ಬಾರದಿರಿ! ಬಾರದಿರಿ!

ಎದೆಯ ಬಸಿರು ಒಂದೆ ಸಮನೆ
ಸಿಟ್ಟುಸಿರಿನ ಕೂಸುಗಳನು
ಹೆತ್ತು ಹೆತ್ತು ಹೆರಿಗೆನೋವಿನಿಂದ ನರಳುವಂತೆ
ಮಾಡಬೇಡಿರಿ!
ನದಿಯ ತಡಿಯ ಮಳಲ ಕೆರೆದು ಕೆರೆದು ಬಗೆದು ಬಗೆದು
ನೀರುಕ್ಕಿಸುವಂತೆಯೇ,
ಕಣ್ಣಿನೊಳಗೆ
ಇಲ್ಲದಿರುವ ಕಂಬನಿಗಳ
ತಾರದಿರಿ! ತಾರದಿರಿ!
ಬಾರದಿರಿ! ಬಾರದಿರಿ!
ನೆನಪುಗಳೇ!

ಅಂದು—ನಿಮ್ಮನಿಂದು ಹೆರುವ
ಅನುಭವಗಳ ಸವಿಯುವಂದು—
ಮನಕಾಸರೆಯಾಗಿ ದೇಹ
ಸಿಂತು ನರಳಿತು.
ಅಂದನುಭವದಗ್ನಿ ಕುಂಡ-
ದಲ್ಲು ದೇಹ ಕಲ್ಲಿನಂತೆ
ನಿಂತು ಮನವ ಕಾದಿತು!

ಇಂದು ನಿಮ್ಮ ಧಾಳಿಗೆಲ್ಲ
ಮನವದೊಂದೆ ಗುರಿಯು ಕಣಾ!
ನೆನಪ ಶಾಖವೊಂದೆ ಸಾಕು
ಮನದಣುವನು ಸಿಡಿಸಲು!
ಇರುವ ಒಂದೊ ಎರಡೊ ಆಸೆಗಳನು
ಸುಟ್ಟು ಕರಿಕು ಮಾಡಲು!
ನೆನಪುಗಳೇ ಬಾರದಿರಿ!
ಬಾರದಿರಿ! ಬಾರದಿರಿ!

*　　　*　　　*

ಯಾರು?
ಸರಿ ನೀನೋ?
ಅಂದು ನನ್ನ ಬಾಳನೋಡಿನಲ್ಲಿ
ಅರಳ ತೆರದಿ ಹುರಿದುದೊಂದೆ
ಸಾಲದೇನೆ?
ನೆನಪನೇರಿ ಬರುವೆಯೇಕೆ?
"ನಾನೆ ಬಂದರೇನೊ ಎಂತೊ?"
ಎಂಬ ಭಯವೆ?
ಅಂದು ನಿನ್ನನಂತೆ ಬಿಟ್ಟು
ತಪ್ಪ ಮಾಡಿದೆ.

ಹೇಡಿ! ತೊಲಗು ಸಾಕು! ಸಾಯಿ!
"ಸಾಯಿ"!
ಸಾವು?
ಓ ಗೆಳೆಯನೆ ಎಂಥ ಸಾವೊ ನಿನ್ನದು?
ತಂದೆ ತಾಯಿಗಳನು ಬಿಟ್ಟು
ಸಾಯ್ವುದಕೇ ಊರಿನಿಂದ
ನಗುತ ಬಂದೆ!
ಸಾವೆಂದರೆ ನಿನ್ನ ನೆನಪು!
ನೀನೆಂದರೆ
ನಿನ್ನ ನಗೆ ನಿನ್ನ ಮಾತು
ನಿನ್ನ ಒಲವು, ನಿನ್ನ ಸರಸ—
ಇವುಗಳೊಂದು ಮನಕೆ ಬಾರವು!
ಬರುವುದೊಂದೆ!
ಅದೇ ನಿನ್ನ ಹೆಣದ ಚಿತ್ರ!
ನಿನ್ನ ಮಾತು ಬಂದರೆ ಸರಿ
ನಿನ್ನ ಹೆಣವೆ ಕಣ್ಣ ಮುಂದೆ!
ಓ ಗೆಳೆಯನೆ! ಏಕೆ ಸತ್ತೆ?
'ಬದುಕಿ'ದೆನ್ನನೇಕೆ ಕೊಲುವೆ?
ಹೆಣದ ನೆನಪ ತಂದು ನೀನು
"ಹಾಳು ಗೆಳೆಯನಿವನ ಸ್ನೇಹ
ಯಾವ ಶಾಪದೊಂದು ಫಲವೊ!"
ಎಂಬನುಚಿತ ನುಡಿಯ ಬಾಯ್ಗೆ
ತಾರದಿರು! ತಾರದಿರು!
ಕರಗು ಕರಗು ಕರಗೆಲೆ!

* * *

ಶುದ್ಧ ಹುಚ್ಚು!
ಕರಗೆಂದರೆ, ತೊಲಗೆಂದರೆ, ಸಾಯೆಂದರೆ

ಕರಗುವವೇ, ತೊಲಗುವವೇ, ಸಾಯುವವೇ
ಮನದ ಗೋರಿಯಿಂದೇಳುವ
ನೆನಪ ಪ್ರೇತ ಪಂಕ್ತಿಯು ?

ನೆನಪುಗಳೇ !
ನಿಮ್ಮ ಕಾಲ ಹಿಡಿದು ಬೇಡುವೆ !
ಇಂತು ಒಂದೆ ಸಮನೆ ಬಗೆಗೆ
ಬಾರದಿರಿ ! ಬಾರದಿರಿ !
ದುಗುಡವನ್ನು
ತಾರದಿರಿ ! ತಾರದಿರಿ !
ಎಲ್ಲಿಂದಲೊ
ಸೋರದಿರಿ ! ಸೋರದಿರಿ !
ಬಂದಂತೆಯೆ ಮಾಯವಾಗಿ
ಮತ್ತೆ ಇತ್ತ ಬಾರದಿರಿ !

# ಉರಿಯುತಿದೆ ಒಲೆಯೊಂದು

ಉರಿಯುತಿದೆ ಒಲೆಯೊಂದು. ಕೊರಡೊಂದು ಬೀಳುತಿದೆ.
ಒಂದೆ ಚಣ ಅದರ ಧೃತಿ! ಕಣ್ಣ ಕತ್ತಲಿಪ ಹೊಗೆ!
ಹೊಗೆ-ಬೆಂಕಿ; ಬೆಂಕಿ; ಕೊನೆ ದ್ರವಿಸುತಿದೆ ನೊರೆಯು ಮಿಗೆ;
ಮೈ ಕೆಂಡ-ಗಾಯಗಳ ತವರಾಯ್ತು; ಕಾಣುತಿದೆ
ಬೂದಿ ಬಿಳಿತೊನ್ನಿನೊಲು; ಉಳ್ದೆನ್ನು, ಬರಿ ಧೂಳು!
ಮೊದಲದನು ಕಡಿಯಲ್ಕೆ ಕೊಡಲಿ ಬೇಕಿತ್ತೊಂದು!
ಉಳ್ದೆನ್ನುವ ಉಸಿರೊಂದೆ ಉರುಳಿಸಲು ಸಾಕಿಂದು!
ಬಾಚಿ ಎಸೆಯಾಚೆಗದಕಿನ್ನು ಗೊಬ್ಬರ-ಬಾಳು!
ಏನು ? ಹಿಂದಿನ ನೆನಪೆ ? ಈಗದರ ಮಾತೇಕೆ ?—
ದಿಟ! ಒಮ್ಮೆ ಇದು ತನ್ನ ಕೆಳೆಯ ಮರಗಳ ಜೊತೆಗೆ
ನಭಕೆ ತಲೆಯೊಡ್ಡಿ, ಬಿರುಗಾಳಿ ಬಡಿಯಲು ತಲೆಗೆ
ನಗುತದನು ಸೆಣಸಿ, ಕೈಯಾಡಿಸುತ್ತೆಡಬಲಕೆ
ಅಳಿಖಗಗಳೊಡನಾಡಿ ಸವಿದ ಸುಖವೆಲ್ಲ ಸತ್ಯ!
ಆದರಿಂದಿನ ಗತಿಯೊ ? ಅದುವು "ಸತ್ಯಸ್ಯ ಸತ್ಯ !"

# ಕಾಮ

ಕಣ್ಸೆಳೆವ ರೂಪು ; ಕಿವಿ ಸೆಳೆವ ಸವಿಗೊರಲ ದನಿ ;
ಲಯವೆ ಅಡಿಯಿಡುವವೊಲು ಎಳನವಿಲ ಬಳುಕು ನಡೆ ;
ಅದರೊಡನೆ ಅತ್ತಿತ್ತ-ಒಲೆಯುತಿಹ ಉದ್ದ ಜಡೆ ;
ಹಣೆ, ಹುಬ್ಬು, ಕಣ್ಣು, ಗಲ್ಲ, ಕೆನ್ನೆ—ಬರಿ ಚೆಲುವ ಬನಿ!
ಚೀಪಿ, ಚುಂಬಿಸಿ, ಕಚ್ಚಿ ಚಪ್ಪರಿಸುತೆಡೆಗೊಡವೆ
ಹೀರಿದನಿತೂ ಒಂದೆ ಸಮನೆ ಸೊದೆ ಸುರಿವ ತುಟಿ ;
ನಸುಗೆಂಪು-ಕಪ್ಪು ಕೊಕ್ಕಿನ, ಅಚ್ಚ ಬಿಳಿಯ ಸುಟಿ-
ಯಾದೆರಡು ಪಾರಿವಾಳದ ಮರಿಗಳಂದದದೆದೆ !—
"ಸಾಕು ! ನಿಲ್ಲಿಸು ನಿನ್ನ, ಉನ್ಮತ್ತ ಕಾಮುಕತೆ
ಜಿನುಗುವೀ ಬಣ್ಣನೆಯ ! ಕಾಮವುಳಿ ; ಪ್ರೇಮವಿಡು"
ಎನ್ನುವೆಯ ? ಪೆಚ್ಚ! ನಿನ್ನೊಲವ ಕೊಂಡೊಯ್ದು ಸುಡು!
ಕಾಮಕ್ಕೆ ಪ್ರೇಮವೊರೆವಂತೆ, ಭಯ, ನಿದ್ರೆ, ಹಸಿವ ಚಿತೆ-
ಗಳಿಗೆಲ್ಲ ಏಕೊರೆಯೆ ? ಬಿಚ್ಚದಿರು ನಿನ್ನ ಕಂತೆ !
ಪ್ರೇಮಗೀಮಗಳೆಲ್ಲ ಬರಿಯ ಸುಳ್ಳುಗಳ ಸಂತೆ !

# ಬಳಲಿಕೆ

ಮೈ ಸೋತು ಬಳಲಿದೆ; ನಿಸರ್ಗಸಂಚಾರಿ ಮನ
ಒಡಲಿಗಿಂತಲು ಜಡವು; ಹೆಪ್ಪುಗಟ್ಟಿದ ಕೊಳವು!
ನಿದ್ದೆ ಎಚ್ಚರಗಳ ವಿಚಿತ್ರ ಮೇಳದ ಸೆಳವು!
ಮುಚ್ಚುಗಂಗಳ ಬಿಚ್ಚಲೂ ಕಷ್ಟ; ಎದೆಯ ಬನ-
ದೊಳದಾವುದೋ ಕಿಚ್ಚು—ಹೊಗೆ-ಕಿಚ್ಚು! ಈ ದೇಹ
ಬೆವರಿ ಗಾಳಿಯು ತೆಳುವು ಪೊರೆ ಚುಂಬಿಸಿದೊಲಾಗೆ
ಒಂದು ಚಣ, ಅಷ್ಟೆ, ಏನೋ ತಂಪು! ಸರಿ, ಬೇಗೆ
ಮೊದಲು; ತಣ್ಣಗೆ ಕೊರೆವ ಸಾವು ಬಿಸಿ? ಸತ್ತೆ! ಹಾ!
'ಸತ್ತೆ'? ಅಯ್ಯೋ ನಿನಗೆ ಕರುಣೆಯುಂಟೇ? ಹುಚ್ಚು!
ಮತ್ತೆ ನರಳಿಸಲೆಬ್ಬಿಸಿಹೆಯೆಂದು ನಾನರಿಯ-
ದವನೆ? ತಡವೇಕೆ? ಹುಂ! ಮೆತ್ತನೆಯ ಹಾಸುಗೆಯ
ಒರಟೆನಿಸು; ತಲೆಯ ತಿರುಗಿಸು; ಕಣ್ಣ, ಬಿಡೆ, ಮುಚ್ಚು!
ಎನ್ನನೊದ್ದಾಡಿಸು; ನಿರಾಸೆ ಹೆರು ಕರಗೆ ಕೆಚ್ಚು!
ಬಳಲಿಕೆಯೆ! ಬಳಲಿಕೆಯೆ ಇಲ್ಲದೊಲು ಅಳಲ ಚುಚ್ಚು!

# ಬೆಳಕು—ಕತ್ತಲೆ

ಹಗಲು ನಂದಿತು, ಇರುಳು ಬಂದಿತು
 ನಿಶೆಯು ಹಬ್ಬಿತು ಸುತ್ತಲು
ಬೆಳಕು ಮುಚ್ಚಿದ ತಾರೆಗಳ ಹೊರ-
 ಗೆಳೆದು ತೋರಿತು ಕತ್ತಲು!

ಮರೆಯ ಕಳೆವುದು ಬೆಳಕು; ಮರೆಯೇ
 ಕತ್ತಲೆಂಬರಿದೇನಿದು!
ಬೆಳಕು ಮುಚ್ಚಿದ ಬೆಳಕ ಬೆಳಗುತ
 ಕತ್ತಲೆಯೆ ಬೆಳಕಾದುದು!

# ಭದ್ರಾವತಿಯನ್ನು ಬಿಡುವಾಗ

೧

ಹಾ! ಇನ್ನು ದೂರವಾದೆಯ ನನಗೆ ಸಂತತಂ
ಕಾಳಧೂಮವನುಗುಳ್ವ ಎಲೆಲೇ ಗಗನಚುಂಬಿ!*
ಭೋರೆನುತ್ತಲಿ ವರುಣ ವೇಗದಿಂ ಜಲದಂಬಿ-
ನಾ ವೃಷ್ಟಿಯಿಂ ಕಾಡಿದರು ತಾ ನಿರಂತರಂ;
ಭೂವಳಯದಲ್ಲೆಲ್ಲಿದೊರ್ಡಂ ನಾಂ ಕಣವೊಂದು
ನೀರನೂ ಬಿಡದೆ ಹೀರುವೆನೆಂಬ ಪ್ರಾಣಾಂತು
ಜಗವ ಸುಡುತಿದ್ದರೂ ಭಾಸ್ಕರನು—ಮೃಗಜಂತು
ತರುರಾಜಿ ಸರ್ವಮುಂ ಇರೆ ಬಿಸಿಲೊಳುರಿ ಬೆಂದು;
ನೀ ಮಾತ್ರ ಎದೆಗೆಡದೆ ನಗುನಗುತ ತಲೆಯೆತ್ತಿ
ಕಾಳಧೂಮವನುಗುಳ್ವ ನಿನ್ನ ಕಾರ್ಯದಿ ಮಗ್ನ-
ನಾಗಿರುತ ಈ ಪ್ರಪಂಚದ ಜನಕೆ ನೀ ನಗ್ನ-
ಸತ್ಯವೊಂದನು ಸಾರುತಿಹೆ ಧೈರ್ಯವನು ಬಿತ್ತಿ:
ಎಲೆ ಮನುಜ! ಜೀವನದಿ ಏನು ಬಂದರು ಮುತ್ತಿ
ಎದೆಗೆಡದೆ ನಗುನಗುತ ಎದುರಿಸದ ತಲೆಯೆತ್ತಿ!

---

* ಭದ್ರಾವತಿಯಲ್ಲಿರುವ ಎರಡು ದೊಡ್ಡ ಚಿಮಣಿಗಳನ್ನು ಕುರಿತು.

# ಭದ್ರಾವತಿಯನ್ನು ಬಿಡುವಾಗ

೨

ಎಂಥ ಕಲ್ಲೆದೆಯವನು ಗಂಟೆ ಬಾರಿಸಿದಾತ!
ಬಲವೆಲ್ಲ ಬಿಟ್ಟುಸಿರ ತುಂಬಿದನು 'ಶಿಲ್ಪಿ'ಯೊಳು
(ಆ ರವಕೆ ಬೆಚ್ಚಿದವು ಸುತ್ತಲಿನ ಬಲ್ಬುಗಳು!)
ಆ ಕ್ರೂರಿ ಹಸುರು ದೀಪವನೊಮ್ಮೆ ಆಡಿಸುತ!
ಕಿವಿ ಬಿರಿಯುವಂದದೊಳು ಅಬ್ಬರಿಸುತಾ ಶಕಟ
ನಿಟ್ಟುಸಿರನು ಬಿಡುತ್ತ ನನ್ನನೆಳೆಯಿತು ಮುಂದೆ!
ಚಕ್ರ ಕಂಬಿಗಳೆರಡು ಕೂಡಿಯೊಕ್ಕೊರಲಿಂದ
ದುಃಖದಾವೇಗದಿಂ "ಅಕಟಕಟ ಅಕಟಕಟ"
ಎಂದು ದನಿ ಗೈಯುತಿರೆ (ಮೋಡದಿ ಮುಳುಗಿದ ಪೆರೆ!)
ಭದ್ರಾವತಿಯು ತನ್ನ ನೂರು ಕಣ್ಣುಗಳಿಂದ
ನೋಡುವೊಲೆ ಮಿನುಗೆ ವಿದ್ಯುದ್ದೀಪಗಳ ತಂಡ,
ತೆರೆಯಾಗಿ ಉಕ್ಕಿಬರೆ ಕಣ್ಣಿನೊಳು ನೀರ ನೆರೆ
ಕತ್ತಲಿನ ಕಡಲಿನೊಳು ಕರಗಿಹೋಯಿತು ನನ್ನ
ಪ್ರಿಯನಗರಿ! ಹಾ! ಎನ್ನನಾವರಿಸಿತಲ ಬನ್ನ!

# ಭದ್ರಾವತಿಯನ್ನು ಬಿಟ್ಟಮೇಲೆ

೧

ಅಂದು ಮಾರುವ ಕಟ್ಟೆಯೊಳು ನಾನು ಗೊತ್ತುಗುರಿ-
ಯಿಲ್ಲದೊಲು ತಿರುಗುತಿರೆ, ಕಂಡೆನಲ ನಾನೊಬ್ಬ
ಮನುಜ ಮಾರುತಲಿಹುದ ರಾಸಿ ಒಣಕಲು ಕಬ್ಬ!
ಗಾಣದೊಳು ಹಿಂಡಿದರು ಕಾಲೊಳೊತ್ತಿದರು ಕರಿ
ರಸದ ಸುಳಿವಿಲ್ಲದಿಹ ಕಬ್ಬಿನಂದದ ಬೊಂಬು !
ಭದ್ರಾವತಿಯಲಿರುವ ಆಲೆಮನೆಗಳ ತಂಡ-
ಕಾ ಚಣವೆ ಮನ ಹಾರಿ, ಬಿಸಿಯ ಬೆಲ್ಲದ ತುಂಡ
ಚಪ್ಪರಿಸಿ, ಗಾತ್ರದೊಳು ಕೊಡವನಣಕಿಪ ಚೊಂಬು
ತುಂಬಿಕೊಂಡಿಹ ಮಧುರ ರಸವನಾಗಲೆ ಈಂಟಿ
ಕೊಪ್ಪರಿಗೆಯೊಳು ಕುದಿವ ರಸದ ಮಡುವಿನ ಗಂಧ-
ವನು ಮೂಸಿ, ಹಿಂದಿರುಗಿತಾ ಚಣವೆ ಕನಸಿಂದ—
ರಸಹೀನಮಾದೊಡಂ ಸ್ವಪ್ನಲೋಕಕೆ ದಾಂಟಿ
ಪೋಗಲನುಕೂಲಿಸುತ ರಸವುಕ್ಕಿಸಿದ ಇಕ್ಷು !
ನಾ ಋಣಿಯು ! ಆ ಕನಸ ಮತ್ತೆ ಕಾಣದು ಚಕ್ಷು !

# ಭದ್ರಾವತಿಯನ್ನು ಬಿಟ್ಟಮೇಲೆ

೨

ಮೇಲೆ ನಭವನು ಭರದಿ ಕರಿಯ ದೆವ್ವದವೋಲು
ಕಾರ್ಮುಗಿಲು ದೆಸೆದೆಸೆಗು ಕೈ ಚಾಚಿ ತಬ್ಬುತಿದೆ.
ತಿರೆಯೊಳೋ ಎಲ್ಲಿ ನೋಡಿದರಲ್ಲಿ ಹಬ್ಬುತಿದೆ
ಕಾರಿರುಳು, ಮೇಲಿರುವ ಕಾರ್ಮುಗಿಲ ನೆರಳಿನೊಲು!
ಕಪ್ಪನೆಯ ಗಾಜಿನೊಳು ಕಂಡರೆಂತೋ ಅಂತೆ
ಗಿರಿ ಪಂಕ್ತಿ, ತರುರಾಜಿ, ಬರಿಯ ಕಪ್ಪನೆ ಕಾರಿ
ನಿಂತಿಹವು ಕಾಡಿಗೆಯ ಮುದ್ದೆಗಳವೊಲು ತೋರಿ!
ಕಾರ್ಮುಗಿಲ ಹುತ್ತದಿಂ ಬಂದಹಿಯೊ ಎಂಬಂತೆ
ಮಿಂಚಿರಲು, ಮೊದಲಾಯ್ತು ಮಳೆಯ ಹೊಡೆತವು ಹೊರಗೆ.
ಬಿರುಗಾಳಿ, ಗಿರಿರಾಜರಿಬ್ಬರೊಳಸಂಚಿನೊಳು
ಆ ಜಳದ ತಿರೆಗುರುಳುತಿರುವನಹ! ಮಿಂಚಿನೊಳು
ಸ್ವರ್ಣತಂತುಗಳಂತೆ ಮಳೆಯ ಧಾರೆಯು ಮಿನುಗೆ!—
ಇಂತು ಮನ ಈವೂರ ಕುಟುಕು ಮಳೆಯನು ಕಂಡು
ನೆನೆಯುತಿದೆ ಭದ್ರಾವತಿಯ ಮಳೆಯ ಸೊಬಗುಂಡು!

# ಭದ್ರಾವತಿ

೧

ದೂರವಾಯಿತು ಇಲ್ಲವಾಯಿತು
ಇನ್ನೆನಗೆ ಭದ್ರಾವತಿ
'ರಸದ ಮಡುವನು ತೊರೆದು ಬಂದೆನೆ'
ಎಂದು ತುಡಿವುದು ಮನ್ಮತಿ
ಎಂದಿಗೋ ಇನ್ನಂಥ ತಾಣವ
ನಾನು ಕಾಂಬುದು ಕಣ್ಣೊಳು ?
ತೊಳಲುವುದು ಮನ ಮಿಲಮಿಲನೆ ಹುಳು
ಹೊರಳುವೊಲು ಹಿಡಿಮಣ್ಣೊಳು !

ದೂರವಾದುದು ಮೋಡಗಳು ತಂ-
ಗುತ್ತಲಿದ್ದಾ ಶೃಂಗವು
ಇಲ್ಲವಾದುದು ಎನಗೆ ಇನ್ನಾ
ಕೆಳೆಯರೊಲವಿನ ಸಂಗವು
ದೂರವಾದುದು ಗಗನದೊಡಲಿಗೆ
ಹೊಗೆಯ ತೂರುವ ಚಿಮಣಿಯು !
ದೂರವಾದಳು ಪ್ರೇಮ ಪುತ್ಥಳಿ-
ಯೆನಿಸಿ ಮೆರೆದಾ ರಮಣಿಯು !

ಹೊನ್ನ ಬಿಸಿಲೊಳು ಮಿಂದು ನಿಂದಿಹ
ಪಚ್ಚೆ ಹಸುರಿನ ಬಯಲೊಳು
ಜುಳುಜುಳನೆ ಹಾಡುತ್ತ ಭದ್ರೆಯು
ಹರಿಯುತಿರೆ ಬಿಳಿ ಮರಳೊಳು
ಸೂರ್ಯನುರಿ ಮಿತಿ ಮೀರಿರಲು ತಂ-
ಪೀವ ಹೊಂಗೆಯ ನೆರಳೊಳು
ಕಾಲ ಕಳೆದೆನಗೇನು ತೋರದು
ಸಾಂದ್ರ ಜನದೀ ಪುರದೊಳು !

೨

ಓಹೊ! ಭದ್ರಾವತಿಯೆ! ನಿನ್ನಯ
ಮಡಿಲೊಳೆನ್ನಯ ಬಾಲ್ಯವ
ಕಳೆದೆನೆನ್ನಯ ಮನವು ತಳೆವುದೆ
ಆ ದಿನಗಳಾನಂದವ ?
ಕಾಲದಾ ನೆರೆ ನನ್ನನಿಲ್ಲಿಗೆ
ನಿಷ್ಕರುಣೆಯಿಂ ಸೆಳೆದುದು
ರಕ್ತ ಮಾಂಸಗಳುಳಿದ ದೇಹದ
ಉಸುರಿನೊಲು ನೆನಪುಳಿದುದು!

ಅಲ್ಲಿಯೇ ನಾ ವಿಫಲನಾದುದು
ದೊಗಳೆ ಮೆಟ್ಟೊಳು ನಡೆಯಲು;
ಕೋಪವೇರಲು ಮನವಗೈದುದು
ಹಲ್ಲಿನೊಳು ಕೆರ ಕಡಿಯಲು;
'ಊರಿಗೊಬ್ಬನು ಚಂದ್ರನಿರುವನೆ'
ಎಂಬ ಪ್ರಶ್ನೆಯ ಕೇಳ್ದುದು;
ನಗುತಲಪ್ಪನ ಗುಂಡಿಗಳನೇ
ಬುಗುರಿಯೊಲು ತಿರುಗಿಸಿದುದು!

ಅಲ್ಲಿಯೇ ನಾ ವರ್ಣಮಾಲೆಯ
ಮೊದಲ ಅಕ್ಷರ ಕಲಿತುದು;
ಗೋಡೆಗಳೊಳೇ ಕಲಿತ ವಿದ್ಯೆಯ-
ನೆಲ್ಲ ಮೆರೆಸುತ ನಲಿದುದು;
ಬಳಪ ಹಲಗೆಯ ಕೊಂಡು ತಂದರು
ಬೇಡವೆನ್ನುತಲೆಸೆದುದು;
'ಗೋಡೆಯೇ ಸರಿ' ಎಂಬ ಭಾವವು
ನನ್ನ ಮನದೊಳು ಮುಸೆದುದು!

'ಬನ್ನಿರೋ ಹೊತ್ತಾಯಿತೆಲ್ಲರು'
ಎಂದರಚೆ ಕಾರ್ಖಾನೆಯು
ಮಸಿಯನಣಕಿಪ ವಸ್ತ್ರ ಧರಿಸಿಹ
ಕೂಲಿಗಾರರ ಸೇನೆಯು
ಕರದಿ ಬುತ್ತಿಯ ಹಿಡಿದು ಹೋಗುತ
ಲಿರಲು ಇರುವೆಯ ಸಾಲೊಲು
ಅದನೆ ನೋಡುತ ನಿಲ್ವೆನಹಹಾ
ಬಾಗಿಲೊಳೆ ನಾ ಶಿಲೆಯೊಲು!

ಈ ಜನ ನಡೆವರಿದೇನನು ಗೈಯಲು
ಎಂಬ ಕುತೂಹಲವೆನ್ನನು ಕಾಡಲು
'ಬಾರೆಲೊ ಹೋಗುವ' ಎನ್ನಲು ತಂದೆ
ಅಂಜುತಲಂಜುತ ನಡೆದೆನು ಹಿಂದೆ!

ಅಲ್ಲೇನಗ್ನಿಯ ರೋಷವೆ ರೋಷ!
ಕರ್ಣಕಠೋರ ಯಂತ್ರದ ಘೋಷ!
ಭೋರೆನ್ನುತಲಿ ಪಿಶಾಚ ಚಕ್ರ
ತಿರುಗಲು ನಡುಗುವವೋಲಾ ಶಕ್ರ
ಮಂದಗಮನದೊಳೆ ಮೇಲಕೆ ಹತ್ತಿ
ನೋಡುತ್ತಿರೆ ತಲೆ ತಿರುಗಲು ಸುತ್ತಿ
ಇದ್ದಿಲದಿರುಗಳ ಶಕಟವು ಸುರಿಯಲು
ಕುಲುಮೆಯೆ ಕಂಡಿತು ನರಕದ ಬಾಯೊಲು!
ಸಿಡಿಲಿನ ಹುತ್ತವೆ ಪುಡಿಪುಡಿಯಾದೊಲು
ಮಿಂಚ ಗೂಡೊಡೆದು ಕಿಡಿ ಚಿದರುವವೊಲು
ಅಚ್ಚರಿಯೆನ್ನಯ ಬಾಯನು ತೆರೆಸಲು
ಕುಲುಮೆಯು 'ಆ' ಎನೆ ಆಕಳಿಸುವವೊಲು
ಅಗ್ನಿದೇವನೇ ನೀರಾದನೊ ಎನೆ
ಬಂಧಿತ ಪಾವಕನೇ ಹೆತ್ತನೊ ಕೆನೆ

ಎಂಬೊಲು ನುಗ್ಗಿತು ಕುಂಕುಮ ಲೋಹ
ನಡೆದಿರೆ ಮಿಂಚು ಸಿಡಿಲ್ಗಳ ಕಲಹ!
ಭಯ ಕೌತುಕಗಳಿಗಾಗಲು ಸಂಗ
ಮನ್ಮನವವುಗಳ ನರ್ತನ ರಂಗ!

ಎಂತೋ ಮರೆವುದು ನಾನೀ ಕಣಸ?
ಬಾಲ್ಯದೊಳಾನನುಭವಿಸಿದ ಹರುಷ!

೩

"ತಿರೆವೆಣ್ಣ ಮೊಲೆವಾಲಿನೊಳೆ ಬೆಳೆದ ನಮ್ಮ
ಸವಿಯ ಬನ್ನಿರಿ" ಎಂದು ತೋಳ್ಬೀಸಿ ತಮ್ಮ
ಆಹ್ವಾನವೀಯುತಿರೆ ಕಬ್ಬಿನಾ ತೋಟ
ಬೇಲಿಹಾರುತ ಕಬ್ಬ ಕದಿವುದೆಮಗಾಟ!

ಆಲೆಮನೆ ಹೊಗೆ ಮುಗಿಲಿಗೋಡುತ್ತಲಿರಲು
ಕೀಚುದನಿಯೊಳು ಗಾಣ ಹಾಡುತ್ತಲಿರಲು
ಚಾವಟಿಯ ರವ ಕೇಳಿ ಬೆಚ್ಚುತಿರಲೆತ್ತು
"ಹೈ! ಹಚಾ!" ಎಂಬವನದೇನಹಹ ಗತ್ತು!
"ಬನ್ನಿ ಬುದ್ದೀ" ಎಂದು ಉಪಚರಿಸುತೆಮ್ಮ
"ತಂಬಿಗೆ ತಗೊಂಬಾರೊ ಬಿರ್ನೆಲೋ ತಮ್ಮ!"
ಎಂದಾಜ್ಞೆಯಿತ್ತು, ತಂಬುಲದ ರಸವುಗುಳಿ
"ಯಾಕ್ಲ ಇಷ್ಟೊತ್ತು?" ಎಂದವನನ್ನು ತೆಗಳಿ.
ನಮಗೋಸುಗವೆ ಗಾಣವನ್ನು ಸಲೆ ತೊಳೆದು
ರಸಭರಿತ ಕಬ್ಬನವ ಕಣ್ಣಿನೊಳೆ ಅಳೆದು
ತಾನೆ ಎತ್ತನು ಹೂಡಿ ಮುಂದಕ್ಕೆತಂದು
ನಾವು ಮೊದಲೇ ಬರದೆ ಇದ್ದುದಕೆ ನೊಂದು
ಕಬ್ಬ ಜೊತೆಗೊಂದು ನಿಂಬೆಯ ಹಣ್ಣನಿಕ್ಕಿ
ಚಾವಟಿಯ ಚಟ್ ಎನಿಸಿ ಗಾಳಿಯೊಳು ಕುಕ್ಕಿ
—ರಸವ ಸೋದಿಸೆ ನಮ್ಮ ಕೈವಸ್ತ್ರವಿರಲು—

ಹಲ್ಲಕಿರಿಯುತಲಿದ್ದು ರಸ ನೀಡುತಿರಲು
"ಚೆಂಬೆರಡೆ ಸಾಕಾಯ್ತು" ಎಂದೆಮ್ಮ ನಕ್ಕು
ಕುಡಿಸುವನು ಆನಂದ ಹರಿಯುತಿರೆ ಮಿಕ್ಕು!
"ಉಂಡ್ರೆ ಉಣಬೇಕೆಮ್ಮ ಬಿಸಿಬೆಲ್ಲ ಬುದ್ದಿ!
ಮಿಕ್ಕೋರ ಆಲೇಲಿ ಸಿಕ್ಕೋದು ಲದ್ದಿ!"
ಎಂದು ಕೊಪ್ಪರಿಗೆಯೊಳು ಕುದಿಯುತಿಹ ರಸವ
ತೋರಿ ಬಣ್ಣಿಪ ತನ್ನ ಬೆಲ್ಲದಾ ಜಸವ!
"ನಾನೇಳಿದುದು ಸುಳ್ಳೆ ಬುದ್ದಿ ನೀವ್ನೋಡಿ"
ಎಂದು ಬೆಲ್ಲವ ಚಪ್ಪರಿಸುವನಕ ಕಾಡಿ
ಕಂಕುಳಿಗೆ ಎರಡು ಜತೆ ಕಬ್ಬು ತುಂಡನ್ನು
ತುರುಕಿ ನಮ್ಮನು ಕಳುಹುತಿರಲೆಷ್ಟು ಚೆನ್ನು!
ಇಂತು ಭದ್ರಾವತಿಯೊಳಿರೆ ರಸದ ತಿನಿಸು!
ಓ! ಅವುಗಳೆಲ್ಲ ನನಗಿನ್ನು ಬರಿ ಕನಸು!

೪

ಕಾಲೇಜಿಗೋಸುಗವೆ ರೈಲಿನೊಳು ನುಗ್ಗಿ
ನಿತ್ಯ ಕಾಣುತಲಿದ್ದೆವಾವು ಶಿವಮೊಗ್ಗಿ.
ಉಗಿಬಂಡಿ ಹೊರಟಿರೆ ಸಲಾಕಿಯನು ಜಗ್ಗಿ
ಠೀವಿಯೊಳು ಹತ್ತುತಿರಲೆಮಗದುವೆ ಸುಗ್ಗಿ!
ಅಲ್ಲಿ ವಿಧವಿಧದ ಜನ ತುಂಬಿರಲು ನೆರೆದು
ಗಾಡಿಗಳ ವೈಶಾಲ್ಯವನು ನಗುತ ಜರೆದು
ವೇಗದಿಂದೋಡುತಿರೆ ಗಾಲಿಗಳು ಹರಿದು
ಕಂಬಿಗಳನೊಡಗೂಡಿ ಕಟಕಟನೆ ಮೊರೆದು
ಅದರ ತಾಳಕೆ ದನಿಯ ಕೂಡಿಸುತಲಂಥ
ಲಾವಣಿಯ ಹಾಡೆ ಕೇಳುವುದೆನಿತು ಚೆಂದ!
ರೈಲ ವೇಗವು ಕಣ್ಗೆ ಮಂಕನ್ನು ತೂರೆ
ತಿರಿವೆಣ್ಣ ಹಸುರುಡುಗೆಯೊಲು ಪೈರು ತೋರೆ
ಗುಡ್ಡಮರಗಳಿಗೆಲ್ಲ ಚಲನೆಯನ್ನಿತ್ತು

ದಿನಬಳಕೆಯಾ ತೆಂಗಿಗೇನೊ ಸೊಬಗಿತ್ತು
ಹಳ್ಳಿ ಹೆಂಗಳ ಕಣ್ಣ ಕುಡಿನೋಟಗಳನು
ಕಂಡು ಉಸ್ಸೆನ್ನುತಲಿ ನಿಟ್ಟುಸಿರುಗಳನು
ಬಿಡುತಲಿರೆ, ಮೊಗಕೆ ಮೊಗವಿತ್ತು ನಿಲಲಲ್ಲಿ
ಹಸರುಗರಗಸದೋಲು ಪಾಪಾಸ ಕಳ್ಳಿ,
ಜರೆದದನು ನಗುನಗುತ ಮುಂದಕಡಿಯಿಟ್ಟು
ಮುಗಿಲನಿರಿಯುವ ತೆರದಿ ಕೂಗೊಂದನಿಟ್ಟು
ಇಕ್ಕೆಲದಿ ಪೈರಿರಲು, ನಡುವಿನೊಳು ಕಂಬಿ
ಬೈತಲೆಯವೋಲಿರಲು, ಅದರೊಳೇ ನಂಬಿ
ತುಂಗೆಯನು ದಾಟುತಿರೆ ಗೌರವದಿ ನಡೆದು
ಸೇತುವೆಯ ಕೆಳಗೊಂದು ಚಿತ್ರವನೆ ಕಡೆದು
ವೇಗದಿಂದೋಡುತಿರೆ ರೈಲು ಬಿಡುವಿರದೆ
ತಂತಿ ಕಂಬಗಳಿಣಿಕಲಾಗಾಗ ಬಿಡದೆ—
ಇವೆ ನಮ್ಮ ಪಯಣದಾ ಬೇಸರಕೆ ಸೋಡಿ,
ಓ ! ಏನು ಒಂದೆರಡೆ ರೈಲಿನಾ ಮೋಡಿ !

ತರಗತಿಯ ಬಿಡಲೆಂದಿಗಿಂತಲೂ ಮುಂಡೆ
ಹಿಂದಿರುಗುತಿದ್ದೆವಲ ತುಂಗೆಯೊಳು ಮಿಂದೆ !
ಓ ! ತುಂಗೆ! ಮಲೆನಾಡಿನೊಳು ಹರಿವ ಗಂಗೆ !
ಭದ್ರೆ ಸಿನ್ನೊಡನೆ ಜನಿಸಿದ ಕಿರಿಯ ತಂಗೆ !
ಎಷ್ಟು ವಿಧವಮ್ಮ ನೀ ತೋರಿದ್ದ ಭಂಗಿ !
ಮಳೆ ಬೀಳೆ, ಹೆಬ್ಬಂಡೆಗಳನು ನೀ ನುಂಗಿ
ಉಕ್ಕುತಿರಲೊತ್ತರಿಸಿ ದಡಗಳನು ಮೀರಿ
ಹುಸಿ ಮುನಿಸುಗೊಂಡಿರುವ ದೇವಿಯೊಲು ತೋರಿ,
ಬೇಸಗೆಯೊಳೇ ನೀನು ಬರಿಮರಳೆ ಆಗಿ
ಮರಳಿನೊಳು ರಜತರೇಖೆಯ ಹೋಲಿ ಬೆಳಗಿ
ಕತ್ತಿಯಲಗಿನ ಹೊಳಹ ಜರಿದು ನೀ ಹರಿದೆ
ಮಾಸಮಾಸಕೆ ವಿವಿಧ ಭಂಗಿಗಳ ಮೆರೆದೆ !

ಶುಷ್ಕೋಪನ್ಯಾಸದೊಳು ಬೆಂದೆಮಗೆ ತಂಪ
ನೀಡಿ ಉಳಿಸಿದೆ ಬರಿಯ ನೆನಹುಗಳ ಕಂಪ!

ಇಲ್ಲದಿರೆ ನಡಿಗೆಯೊಳೆ ಪಯಣವನು ಬೆಳೆಸಿ
ಹೊರಟಿರಲು ಗೊತ್ತುಗುರಿಯಿಲ್ಲದೊಲು ಬಳಸಿ
"ನಮಗೆ ನಾವೇ ದೊರೆಗಳಿನ್ನಾರ ತಡೆಯು"
ಎಂಬ ಭಾವಕ್ಕಿಂಬನೀಯುತಿರೆ ನಡೆಯು
ಗುರಿಯೇನೊ ಭದ್ರಪುರಿ! ತನು ಮಾತ್ರ ಮರದಿ!
ಇಲ್ಲದಿರೆ ಬೀದಿಗಳ ಕಲ್ಲುಗಳು ಕರದಿ!
ಮಳೆ ಬಂದು ಜಾರಿದರು ನೇರಳೆಯ ಮರವು
ಏರುತಲಿ, ಮರದೆಡೆಗೆ ಉಜ್ಜುತಿರಲುರವು
ಹೊಟ್ಟೆಯಳತೆಯ ಮೀರಿ ತುಂಬುತಲಿ ಹಣ್ಣ
ಬೆನ್ನ ಹಿಂದೈತರುತ ನೇರಳೆಯ ಬಣ್ಣ-
ವನು ತಿಳಿಯದೊಲು ಹಚ್ಚಿ ಗೆಳೆಯನಿಗೆ ನಗುತ
ನೇರಳೆಯ ಬೀಜಗಳೊಳೇಟುಗಳ ತಿನುತ
ಅಲ್ಲೆ ಹಳ್ಳಿಯ ಬಾವಿಯೊಳು ನೀರ ಕುಡಿದು
ಸೇರುತಿದ್ದೆವು ಕೊನೆಗೆ ನಮ್ಮೂರ ನಡೆದು.
ಇಂತು ಭದ್ರಾವತಿಯೊಳಿರೆ ರಸದ ತಿನಿಸು—
ಓ! ಅವುಗಳೆಲ್ಲ ನನಗಿನ್ನು ಬರಿ ಕನಸು!

೫

ಕೂಲಿಗಾರರ ತಂಡ ಪೋಗುತಿಹ 'ಜರಬು'
ಕಂಡುದಿಸುತಿತ್ತೆನಗೆ—ಬಾಲ್ಯದೊಳು—ಕರುಬು!
ಅಂದೆನ್ನ ನಿಷ್ಕಪಟ ಮನಕೇನು ಗೊತ್ತು?
ಅವರ ಕೊರೆ? ಅಧಿಕಾರಿಗಳ ಮದದ ಮತ್ತು?
'ಸಂಬಳವನೇರಿಸಿರಿ' ಎಂದು ಚಣಚಣಕೆ
ಮುಷ್ಕರವು ನಡೆಯೆ ಹಿನ್ನೆಲೆಯಂತೆ ರಣಕೆ
ಅದೆ ತಾನೆ ದೇಶದೊಳು ಸ್ವಾತಂತ್ರ್ಯಘೋಷ

ಹಬ್ಬಿತ್ತು ಮಿತಿಯ ಮೀರಿರೆ ಜನರ ರೋಷ.
ಬಿದ್ದರಲ ಗುಂಡಿನೇಟಿನೊಳು ಜನ ಸತ್ತು!
ಸಾಮ್ರಾಜ್ಯಶಾಹಿಯೊಲು ರೂಹಾಂತು ಮೃತ್ಯು
ತಾಂಡವವನಾಡುತಿರೆ ದೇಶದಾದ್ಯಂತ
ಏರುತಿರಲಮಿತ ಜನ ಸೆರೆಮನೆಯ ಹಂತ
ಮಲಗಿ ನಿದ್ರಿಸಿದೆನ್ನ ಭಾವಗಳಿಗಂದು
ಚಾವಟಿಯೊಳೇಟ ಬಿಗಿದಂತಾಗೆ, ನಿಂದು
ತಾಂಡವವನಾಡುತಿರೆ ಮನ-ರಂಗದಲ್ಲಿ
ಮಿಂಚ ಗೊಂಚಲು ಸಂಚರಿಸಿತಂಗದಲ್ಲಿ!
ಬಿಡಿ ಮುಖಂಡರನೆಂಬ ದನಿ ಸೀಳೆ ಮುಗಿಲ
ಮುಷ್ಕರಗಳೆಲ್ಲೆಲ್ಲು ಹಬ್ಬಿಸಿರೆ ದಿಗಿಲ
ಅಃ! ಇದರ ಬಿಸಿಯು ಭದ್ರಾವತಿಗು ತಟ್ಟಿ
ಮುಗಿಲೊಳೇ ಸಿಂದಿತಧಿಕಾರಿಗಳ ದಿಟ್ಟಿ!

ತಮ್ಮ ಮೆಚ್ಚಿನ ನಾಯಕರ ದಸ್ತಗಿರಿಯ
ಕೇಳಿ, ರವಿ ಮುಳುಗುತ್ತಲಿರಲಸ್ತಗಿರಿಯ
ಕೆಂಪ, ಮೀರಲು ಕೂಲಿಗಳ ಕಣ್ಣ ಕೆಂಡ
ಮುತ್ತಿತಾ ಚಣವೆ ಠಾಣೆಯನವರ ತಂಡ!
ಆಗ ಬಂದಿತು ಕರೆಯು ಮಾರಿಯೌತಣಕೆ
ಲಾಠಿಗಳು ಬರಲು ಬರಿಗೈಯೊಡನೆ ರಣಕೆ!
'ಉಹು! ಇಷ್ಟು ಸಾಲದೋ' ಎಂಬವೊಲು ಬರಲು
ರೈಲೊಂದು ಚುಕುಪುಕನೆ, ಬೊಂಬು ತುಂಬಿರಲು
ನುಗ್ಗಿ ನಿಲ್ಲಿಸಿ ರೈಲ ಬೊಂಬುಗಳ ತರಲು
ಝಳಪಿಸುತ 'ಜೈ' ಎಂದು ಕೂಗುತ್ತೈತರಲು
ಅಧಿಕಾರಿಗಳು ಹಲ್ಲ ಕಟಕಟನೆ ಕಡಿಯೆ
ಗುಂಡುಗಳನೆಡೆಬಿಡದೆ ಮಳೆಯವೊಲು ಜಡಿಯೆ
ಓಡಿದರಲಾ ಮೂಳೆ ಚಕ್ಕಳಗಳುಳಿಸೆ
ಬೇರೆಯೇನೂ ಇರದೆ ತಮ್ಮ ಬಳಿಯುಳಿಸೆ!

೯೨

ಜನರ ಬೇಟೆಯು ತಡೆಯೆ ಇಲ್ಲದೊಲು ಸಾಗಿ
ಎಲ್ಲೊ ಆಡುತಲಿದ್ದ ಮಗು ಗುಂಡು ತಾಗಿ
ಸತ್ತುಬಿದ್ದರು ತೃಪ್ತಿಗೊಳ್ಳದೆಯೆ ಗುಂಡ
ಮುಗಿಸಿ ಕುಳಿತರು ಚೆದರೆ ಕೂಲಿಗಳ ತಂಡ !
ಹಾಲ ಕಾಸುತಲಿರಲು ಬುಸ್ಸೆಂದು ಉಕ್ಕೆ
ಮರುಚಣವೆ ನೀರಿನಿತ ಉಫ್ಫೆಂದು ಕುಕ್ಕೆ
ಎಂತೊ ಶಾಂತಿಯ ತಾಳ್ವ ಹಾಲ ತೆರವೆಲ್ಲ
'ಶಾಂತವಾಯಿತು'—ಗುಂಡುಗಳು ನಿಫಲಮಲ್ಲ!
ಎಂತು ಮರೆವುದು ಮನವು ಆ ರುದ್ರ ಕಣಸ !
ನಡುಗುವುದು ಎದೆ, ರಾತ್ರಿ ಕಂಡರಾ ಕನಸ !

೬

ನಿನ್ನ ನೆಂತಗಲಿರಲಿ ಓ ನನ್ನ ಭದ್ರೆ !
ನಿನ್ನನುಳಿದೆನಗಿನ್ನು ಬಾರದಲ ನಿದ್ರೆ !
ಬಣ್ಣ ಬಣ್ಣದ ಮಿಾನುಗಳು ಕುಣಿಯೆ ನಿನ್ನ
ನೋಡುತಿರೆ—ಊರಾಚೆ—ಅಹ ! ಏನು ಚೆನ್ನ!
ಊರ ಮಧ್ಯದಿ ಮಾತ್ರ ರೂಪವನು ನೀನು
ತ್ಯಜಿಸಿರುವೆ ತಾಯಿ ಈ ನಿನ್ನ ಹದನೇನು ?
ಮೂಡುವೆಳೆ ನೇಸರನ ಹೊಂಗಿರಣ ನಿನ್ನ
ಎದೆ ಮೇಲೆ ನರ್ತಿಸದು, ಏನಿದೀ ಬನ್ನ?
ಹೊರಗಿನೊಲು ಹಳ್ಳಿ ಹೆಣ್ಣುಗಳೆಲ್ಲ ಬಂದು
ಕೈಗಡಗ ದನಿಗೈಯೆ, ಕೊಡಗಳನು ತಂದು
ನೀರಿಗೋಸುಗ ದಡದಿ ನಿಂತಿರುವ ನೋಟ
ಕಾಣದಲ ! ಏಕಿಂತು ? ಯಾರದೀ ಮಾಟ ?
ಊರಾಚೆ ನಿನ್ನೊಳೇ ತೊಂಡು ತಿರುಗುತ್ತ-
ಲಿದ್ದ ನಕ್ರಗಳೆಲ್ಲಿ ? ಅಡಸಿತೇ ಕುತ್ತ ?
ಕಡೆಗೊಂದು ಎಮ್ಮೆಯೂ ಕಾಣದಲ ಇಲ್ಲಿ !
ಮರದ ತೋಪಿನ ನೆರಳ ವೈಚಿತ್ರ್ಯವೆಲ್ಲಿ ?

ಹಳ್ಳಿ ರೈತನು ನೆಲಸೆ ಊರೊಳಗೆ ಬಂದು
ಗತಿಗೆಟ್ಟು ನಿಂದಿಹನು ಕೂಲಿಯಾಗಿಂದು !
ಅಂತೆ ನೀನೂರಾಚೆ ಮೆರೆವ ಸುಂದರಿಯು !
ಊರೊಳಗೊ? ಕೊಳಕು ಪಾಚೆಗಳ ಮಂದಿರೆಯು!
ಯೋಚನೆಯಿದೊಂದೆ ಮನರಂಗದಲಿ ಸುಳಿಯೆ
ಕಣ್ಣೀರ ಕಾರುವೆನು ಹೃದಯ ಬಸವಳಿಯೆ!

೭

ಅಲ್ಲಿ ಪ್ರೇಮದ ಮೊಟ್ಟ ಮೊದಲನೆ
ಪಾಠವನು ನಾ ಕಲಿತುದು
ಹೆಣ್ಣಿನೊಲವಿನ ಮಡುವಿನಾಳವ-
ನಲ್ಲಿಯೇ ನಾನರಿತುದು !
ಅಲ್ಲೆ ಎನ್ನಯ ಒಲವಿನಾ ಗಣಿ
ದೊರಕದಿರೆ ನಾ ನೊಂದುದು !
ಅಲ್ಲೆ ಕಮಲೆಯ ಕಣ್ಣನೋಟದೊ
ಳೆನ್ನ ಹೃದಯವು ಬೆಂದುದು !

ಒಲವಿನೂರನು ತೊರೆದ ದುಃಖದಾ ಸಂತೆ
ಸಾಲದೇಂ ? ಕಾಡುತಿದೆ ಕಾದಲೆಯ ಚಿಂತೆ !
ತಾಯ ಮಡಲಿನ ತಂಪಿನಾಸರೆಯ ಬಿಟ್ಟು
ವಿರಹದುರಿಯೊಳು ನಾನು ಬೇಯುತಿಹೆ ಸುಟ್ಟು !
ಅಲ್ಲಿತ್ತು ಒಲಿದವಳ ಸವಿಮಾತಿನುಣಿಸು !
ಓ ! ಅವುಗಳೆಲ್ಲ ನನಗಿನ್ನು ಬರಿ ಕನಸು!

೮

ಕೇರಿನೊಳು ಅಲ್ಲಲ್ಲಿ ಸುಳಿಯುವ
ದ್ರಾಕ್ಷಿ-ಗೋಡಂಬಿಗಳೊಲು
ಜೇನುತುಪ್ಪದಿ ಮಿಂದು ಬಂದಿಹ
ತೋರ ಹಲಸಿನ ತೊಳೆಯೊಲು

ಪೋದವೆನ್ನೊಳು ಉದ್ಭವಿಸುವುದು
ನಗೆಯು ಅಧರದಿ ಮಿನುಗಲು
ಯೋಚಿಸುತ್ತಲಿ ಮನವು ಸುಮ್ಮನೆ
ನೆನಪ ಮೆಲುಕನು ಹಾಕಲು !

ಕೆರದ ಒಡಲೊಳಿ ಮನೆಯ ಮಾಡುತ
ಹಿಂಸಿಸುವ ಮೊಳೆಯಂದದಿ
ಮಧುರ ದಧಿಯನ್ನದೊಳಿ ಹುದುಗಿಹ
ನೊರಜುಗಲ್ಲುಗಳಂದದಿ
ಕೆಸರ ಬಸಿರೊಳಗವಿತುಕೊಂಡಿಹ
ಮುಳ್ಳುಗಳವೊಲು ಚುಚ್ಚುತ
ಮರು ಚಣವೆ ಉಕ್ಕುತ್ತ ದುಃಖವು
ಬಹುದು ಕರುಳನು ಹಿಂಡುತ !

ಇಂತು ಸುಖ-ದುಃಖಗಳ ಉಯ್ಯಾಲೆ-
ಯೊಳಗೆ ಆಡುತಲಿದೆ ಮನ
ಕರತಲವು ಚುಬುಕಾಗ್ರದಲ್ಲಿರೆ
ಸುಳಿಯೆ ನೆನಹುಗಳಾ ಸ್ವನ.
ಕಾಲದಾ ನೆರೆ ನನ್ನನಿಲ್ಲಿಗೆ
ನಿಷ್ಕರುಣೆಯಿಂ ಸೆಳೆದುದು
ರಕ್ತಮಾಂಸಗಳುಳಿದ ದೇಹದ
ಉಸುರಿನೊಲು ನೆನಪುಳಿದುದು !

ದೂರವಾಯಿತು ಇಲ್ಲವಾಯಿತು
ಇನ್ನೆನಗೆ ಭದ್ರಾವತಿ
'ರಸದ ಮಡುವನು ತೊರೆದು ಬಂದೆನೆ'
ಎಂದು ತುಡಿವುದು ಮನ್ಮತಿ.

೯೫

ಎಂದಿಗೋ ಇನ್ನಂಥ ತಾಣವ
ನಾನು ಕಾಂಬೆನು ಕಣ್ಣೊಳು ?
ತೊಳಲುವುದು ಮನ ಮಿಲಮಿಲನೆ ಹುಳು
ಹೊರಳುವೊಲು ಹುಡಿಮಣ್ಣೊಳು !*

---

* ದಿವಂಗತ ಶ್ರೀಮಾನ್ ಬಿ.ಎಂ. ಶ್ರೀಕಂಠಯ್ಯನವರು ಏರ್ಪಡಿಸಿದ "ರಜತೋತ್ಸವ ಕನ್ನಡ ಸ್ವರ್ಣಪದಕ" ಸ್ಪರ್ಧೆಯಲ್ಲಿ ೧೯೪೮ರಲ್ಲಿ ಬಹುಮಾನ ಪಡೆದ ಕವಿತೆ.

# ಮೊದಲ ಚರಣಗಳು

